# ಎಂ. ಟಿ. ಭೋಪಲೆ

# M.T. Bhopale



ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy

ಡಿ.ಎನ್.ಅಕ್ಕಿ (ದೇವೇಂದ್ರಪ್ಪ ನಾಭಿರಾಜ ಅಕ್ಕಿ) ಹುಟ್ಟೂರು ಗೋಗಿ, ಶಹಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಪ್ರಸಿದ್ಧ ವರ್ತಕರ ಮನೆತನ.

೧೯೭೧ರಲ್ಲಿ ಗದುಗಿನ ವಿಜಯ ಕಲಾ ಮಂದಿರದಲ್ಲಿ ಡಿ.ಟಿ.ಸಿ (ಚಿತ್ರಕಲೆಯಲ್ಲಿ ಡಿಪ್ಲೋಮಾ ಕೋರ್ಸ್) ತರಬೇತಿ. ೧೯-೦೧-೭೧ರಲ್ಲಿ ಚಿತ್ರಕಲಾ ಶಿಕ್ಷಕ ನೆಂದು ಸರ್ಕಾರಿ ಸೇವೆಗೆ ಪಾದಾರ್ಪಣೆ. ವೃತ್ತಿಯ ಜೊತೆಗೆ ೧೯೭೬ರಲ್ಲಿ ಗುಲ್ಬರ್ಗಾದ 'ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್'ನಿಂದ ಪದವಿ.



ಡಿ.ಎನ್.ಅಕ್ಕಿ

ಶ್ರೀಯತರು ಪ್ರಸ್ತುತ ಕಲ್ಬುರ್ಗಿ ಜಿಲ್ಲೆಯ ಶಹಾಪುರ ತಾಲ್ಲೂಕಿನ ಗೋಗಿಯ ಸರ್ಕಾರಿ ಪದವಿಪೂರ್ವ ಕಾಲೇಜಿನ ಪ್ರೌಢಶಾಲಾ ವಿಭಾಗದಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದಾರೆ. ಸೇವೆಯ ಜೊತೆಗೆ ಶಿಷ್ಯರಲ್ಲಿ ಕಲೆಯ ಆಸಕ್ತಿ ಮೂಡಿಸುವ ಶತಪ್ರಯತ್ನ .

ಇವರು ರಚಿಸಿದ ಅನೇಕ ನಾಟಕ, ರೂಪಕ, ಚಿಂತನ, ಸ್ವರಚಿತ ಕವನಗಳು ಗುಲ್ಬರ್ಗಾದ ಆಕಾಶವಾಣಿ ಕೇಂದ್ರದಿಂದ ಬಿತ್ತರವಾಗಿವೆ. ರಾಜ್ಯದ ಪ್ರಸಿದ್ಧ ಪತ್ರಿಕೆಗಳಲ್ಲಿ ಶ್ರೀಯುತರ ವ್ಯಂಗ್ಯ ಚಿತ್ರಗಳೂ ಪ್ರಕಟವಾಗುತ್ತಿವೆ.

ನಿರ್ಲಕ್ಷ್ಯಕ್ಕೆ ಒಳಗಾಗಿರುವ ಹೈದರಾಬಾದ್-ಕರ್ನಾಟಕ ಪ್ರದೇಶದ ಪ್ರಾಚೀನ ಇತಿಹಾಸ ಕುರಿತು 'ಸಗರನಾಡ ಸಿರಿ' ಎಂಬ ಸಂಶೋಧನಾ ಕೃತಿಯನ್ನು ಪ್ರಕಟಿಸಿ ಅದನ್ನು ರಕ್ಷಿಸಿಕೊಳ್ಳುವಂತೆ ಕರೆ ನೀಡಿದ್ದಾರೆ. ೧೯೮೫ರಲ್ಲಿ 'ಶಹಾಪುರ ತಾಲ್ಲೂಕು ದರ್ಶನ', ೧೯೮೬ರಲ್ಲಿ 'ಚಿಗುರು' ಚಿಂತನ ಕವನ ಸಂಕಲನ, ೧೯೮೭ರಲ್ಲಿ 'ಮುಂಬೆಳಕು' ಎಂಬ ಕವನ ಸಂಕಲನಗಳೂ ಪ್ರಕಟಗೊಂಡಿವೆ.

ಈ ಭಾಗದ ನಡೆದಾಡುವ ವಿಶ್ವಕೋಶದಂತಿರುವ ಅಕ್ಕಿ ಕರ್ನಾಟಕ ರಾಜ್ಯ ಸರ್ಕಾರದಿಂದ ೧೯೯೬ರಲ್ಲಿ 'ಆದರ್ಶ ಶಿಕ್ಷಕ' ಪ್ರಶಸ್ತಿ ಪಡೆದುಕೊಂಡಿದ್ದಾರೆ. ಕೇಂದ್ರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ವತಿಯಿಂದ 'ಆದರ್ಶ ಶಿಕ್ಷಕ' ರಾಷ್ಟ್ರ ಪ್ರಶಸ್ತಿಯನ್ನು ಪಡೆದು ನಾಡಿನ ಗೌರವ ಹೆಚ್ಚಿಸಿದ್ದಾರೆ.

# ಎಂ. ಟಿ. ಭೋಪಲೆ

# M.T. Bhopale



ಡಿ. ಎಸ್. ಅಕ್ಕಿ



ಕರ್ನಾಟಕ ಲಲಿತಕಲಾ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು - 560 001

**Karnataka Lalithakala Academy**

Nrupathunga Road, Bangalore - 560 001

M.T. BHOPALE : A Biography by D.N. Akki. Published by H. Shankarappa Registrar, Karnataka Lalithakala Academy, Nrupathunga Road, Bangalore -560 001 Pages : VIII + 50

First Impression : 1999
Copies : 1000
Price : Rs. 25/-



ಪ್ರಕಾಶಕರು
**ಎಚ್. ಶಂಕರಪ್ಪ**
**ರಿಜಿಸ್ಟ್ರಾರ್, ಕರ್ನಾಟಕ ಲಲಿಕಲಾ ಅಕಾಡೆಮಿ**

ಆಂಗ್ಲ ಅನುವಾದ
**ಸೀಮಾ ದೇಶಪಾಂಡೆ**

*Printed at :*
**DIKSOOCHI**
Printers & Publishers
No. 97, WCR, 3rd Stage 2nd Block,
Basaveshwara Nagar, BANGALORE - 560 079.
PH : 3386606/ 3357198

## ಅಧ್ಯಕ್ಷರ ನುಡಿ .....

ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಕಟಿಸುವ ಅನೇಕ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರುಗಳ ಮತ್ತು ಅವರ ಪರಿಚಯಿಸುವ ಪುಸ್ತಕಗಳನ್ನು ಪ್ರಕಟಿಸುವುದು ಒಂದು. ಹೆಸರಾಂತ ಕಲಾವಿದರ, ಸಾಧನೆ, ಅವರ ಬದುಕು, ಕಲೆಯ ಪರಿಚಯದೊಂದಿಗೆ ಕಲಾ ಇತಿಹಾಸ ಸೃಷ್ಟಿಸುವ ವ್ಯಕ್ತಿಗಳೊಂದಿಗೆ, ಕಲೆಯು ಬೆಳೆದು ಬಂದ ದಾರಿಯನ್ನು ಗುರುತಿಸುವುದು, ಅವರ ಚರಿತ್ರೆಯ ಹಿರಿಮೆ ಗರಿಮೆಗಳನ್ನು ಜನರ ಮುಂದಿಡುವುದು ಇದರ ಉದ್ದೇಶ.

ಈ ಯೋಜನೆಯಲ್ಲಿ ಈಗಾಗಲೇ ಸಾಕಷ್ಟು ಹೊತ್ತಿಗೆಗಳು ಬಂದಿದ್ದು, ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹೈದರಾಬಾದ್ ಕರ್ನಾಟಕ ಕಲಾವಿದರಾಗಿದ್ದ ಶ್ರೀ ಎಂ. ಟಿ. ಭೋಪಲೆಯವರನ್ನು ಕುರಿತದ್ದಾಗಿದೆ.

ಪ್ರತಿ ಪ್ರದೇಶದ ಬೆಳವಣಿಗೆಯ ಹಿಂದೆ ಅದರದೇ ಆದ ಒಂದು ಇತಿಹಾಸವಿರುತ್ತದೆ, ಅಲ್ಲಿ ಸಂಸ್ಕೃತಿಯ ಪಾತ್ರ-ಕೊಡುಗೆ ಹಿರಿದಾಗಿದ್ದು, ಇಂಥಲ್ಲಿ ಅನೇಕ ಕಲಾವಿದರು ತಮ್ಮ ಕೃತಿಗಳ ಮೂಲಕ ಪ್ರದೇಶಕ್ಕೆ ಚರಿತ್ರೆಯನ್ನು ನೀಡಿರುತ್ತಾರೆ. ಅಂತಹವರಲ್ಲಿ ಎಂ. ಟಿ. ಭೋಪಲೆ ಒಬ್ಬರು. ಈ ಗಂಭೀರ ಮತ್ತು ಪ್ರಬುದ್ಧ ಕಲಾವಿದನ ಬಗ್ಗೆ ಶ್ರೀ ಡಿ.ಎನ್. ಅಕ್ಕಿಯವರು ಸಾಕಷ್ಟು ಶ್ರಮವಹಿಸಿ ಅವರ ಅನೇಕ ಮಾಹಿತಿಯನ್ನು ಸಂಗ್ರಹಿಸಿ ಅವರ ಚಿತ್ರ ಶೈಲಿ, ಸಮಕಾಲೀನ ವಿಚಾರಗಳ ಬಗ್ಗೆ ಸಮಗ್ರ ಬದುಕಿನ ಪರಿಚಯ ಬರಹದ ಮೂಲಕ ಮಾಡಿಸಿ ಕೊಟ್ಟಿದ್ದಾರೆ ಹಾಗೂ ಇಂಗ್ಲೀಷ್‌ನಲ್ಲಿ ಸುಂದರವಾಗಿ ಭಾಷಾಂತರಿಸಿ ಕೊಟ್ಟು ಲೇಖಕಿ ಶ್ರೀಮತಿ ಸೀಮಾ ದೇಶಪಾಂಡೆ ಅವರು ಸಹಕರಿಸಿದ್ದಾರೆ. ಅಕಾಡೆಮಿಯ ಪರವಾಗಿ ಮೂಲ ಲೇಖಕರಿಗೂ, ಭಾಷಾಂತಕಾರರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಪುಸ್ತಕದ ವಿನ್ಯಾಸವನ್ನು ಸುಂದರವಾಗಿ ಯೋಚಿಸಿದ ಶ್ರೀ ಬಸವರಾಜ ಮುಸಾವಳಗಿ ಅವರಿಗೂ, ಮುದ್ರಣದ ಕರಡನ್ನು ತಿದ್ದಿ ಮುದ್ರಣದ ಮೇಲ್ವಿಚಾರಣೆಯನ್ನು ನೋಡಿಕೊಂಡ ಡಾ॥ ಹೆಚ್.ಚಂದ್ರಶೇಖರ್ ಅವರಿಗೂ ಅಕಾಡೆಮಿಯ ಪರವಾಗಿ ಧನ್ಯವಾದಗಳನ್ನರ್ಪಿಸುತ್ತೇನೆ. ಈ ಮಾಲೆ ಕಲಾವಿದರಿಗೆ ಕಲಾ ಭಿಮಾನಿಗಳಿಗೆ, ಉಪಯುಕ್ತವಾದಲ್ಲಿ ಶ್ರಮ ವಹಿಸಿ ಬರೆದುಕೊಟ್ಟ ಲೇಖಕರ ಮತ್ತು ಆಸಕ್ತಿ ವಹಿಸಿ ಪ್ರಕಟಣೆ ಕೈಗೊಂಡ ಅಕಾಡೆಮಿಯ ಉದ್ದೇಶ ಸಾರ್ಥಕವಾದಂತೆ.

**ಪ್ರೊ. ಅಂದಾನಿ ವಿ. ಜಿ.**

ಅಧ್ಯಕ್ಷರು

"ಭಾರತೀಯ ಕಲೆ ಸ್ವರ್ಗದತ್ತ ಸಾಗುವ ಸಾಧನ". ಐಹಿಕ ಬದುಕಿಗೆ ಆದ್ಯತೆ ನೀಡಿದ ಪಾಶ್ಚಾತ್ಯ ಕಲಾ ಸಂಪ್ರದಾಯ ಮತ್ತು ಆ ನಾಡಿನಿಂದ ಬಂದ ಕಲಾವಿದ ಹಾಗೂ ಕಲಾ ವಿಮರ್ಶಕ ಪ್ರೊ. ಈ.ಬಿ. ಹ್ಯಾವಲ್‌ರು ಭಾರತೀಯ ಕಲೆಯನ್ನು ಕಂಡು ಸಂತೋಷದಿಂದ ತೆಗೆದ ಉದ್ಗಾರವಿದು. ವಿದೇಶಿಯನಾದರೂ ಹ್ಯಾವೆಲ್ ಭಾರತೀಯರ ಉನ್ನತ ಜೀವನ ಸಂಸ್ಕೃತಿ ಮತ್ತು ದರ್ಶನ ಇಲ್ಲಿಯ ಕಲಾ ಪ್ರಕಾರಗಳಲ್ಲಿ ಹಾಸುಹೊಕ್ಕಾಗಿರುವುದನ್ನು ಕಂಡು ದಂಗಾದ, ಮೆಚ್ಚಿದ, ಅದರತ್ತ ಆಸಕ್ತಿ ತಾಳಿದ, ಅದರ ಪುನರುತ್ಥಾನ-ಕ್ಕಾಗಿ ಪರಿಶ್ರಮಿಸಿದ. ಭಾರತೀಯರು ನಿಸರ್ಗದ ನಿಗೂಢತೆಯಲ್ಲೂ ಅದರ ಅದ್ಭುತ ಸೌಂದರ್ಯದಲ್ಲೂ ಬದುಕಿನ ಗಾಢತೆಯನ್ನು ಶಿವಚೈತನ್ಯವನ್ನು ಕಂಡರು. ಆ ಶಕ್ತಿಯನ್ನೇ ಕುರಿತು ಚಿಂತಿಸಿದರು, ಪ್ರೀತಿಸಿದರು, ಆರಾಧಿಸಿದರು, ಅದರಲ್ಲೇ ಪರಮಶಾಂತಿಯನ್ನು ಕಂಡುಕೊಂಡರು. ಕೊನೆಗೆ ಜೀವನ್ಮುಕ್ತಿಯ ಸಾಧನವನ್ನಾಗಿಸಿಕೊಂಡರು. ಈ ಹಿನ್ನೆಲೆಯಲ್ಲಿ ಮೈದಾಳಿದ ಇಲ್ಲಿಯ ಕಲಾ ಪ್ರಕಾರಗಳ ಪರಮಗುರಿ ಮುಕ್ತಿಯಾದರೆ ಅದಕ್ಕೆ ತಳಹದಿ ಧರ್ಮ. ಹೀಗಾಗಿ ಭಾರತೀಯ ಕಲೆಗೆ ತನ್ನದೇ ಆದ ವೈಶಿಷ್ಟ್ಯತೆಯಿದೆ, ಚಲುವಿದೆ, ಚೈತನ್ಯವಿದೆ, ಉನ್ನತ ಬದುಕಿನ ಮಾರ್ಗ ಸೂಚಿ ಇದೆ. ಈ ಎಲ್ಲಾ ತತ್ವಗಳು ಇಲ್ಲಿಯ ಸಾಹಿತ್ಯದಲ್ಲಿ ಸ್ಫುರಣಗೊಂಡಿವೆ, ಶಿಲೆಯಲ್ಲಿ ಅರಳಿ ನಿಂತಿವೆ, ಶಬ್ದದಲ್ಲಿ ತಾಡನಗೊಂಡಿವೆ, ಸಂಗೀತದಲ್ಲಿ ಸುಶ್ರಾವ್ಯವಾಗಿ ಆಲಾಪನೆಯಲ್ಲಿ ಅಲೆ ಅಲೆಯಾಗಿ ಅನುರಣಗೊಂಡಿವೆ. ಕುಂಚದಲ್ಲಿ ಕುಡಿಯೊಡೆದಿವೆ. ಇಲ್ಲಿಯ ಎಲ್ಲಾ ಕಲೆಗಳ ಆಳಕ್ಕಿಳಿದು ನೋಡಿದಾಗ ನಮಗೆ ದಕ್ಕುವುದು ದೈವಿ ಸಮರ್ಪಣೆ ಹಾಗೂ ಜೀವನೋನ್ನತಿ. ಹೀಗಾಗಿ ಆಯಾ ಭೂಪ್ರದೇಶ ಪರಿಸರಕ್ಕನುಸಾರವಾಗಿ

ಮೈದಾಳಿದ ಇಲ್ಲಿಯ ಎಲ್ಲಾ ಕಲೆಗಳಲ್ಲಿರುವ ಏಕಸೂತ್ರ ಸತ್ಯಂ ಶಿವಂ ಸುಂದರಂ ಎಂಬ ದಾರ್ಶನಿಕ ತತ್ವ

ಹಿಂದುಳಿದ ಪ್ರದೇಶವೆಂದು ಹಣೆಪಟ್ಟಿ ಹಚ್ಚಿಕೊಂಡ ಹೈದರಾಬಾದ ಕರ್ನಾಟಕ ಪ್ರದೇಶ, ಈಗ ಆರ್ಥಿಕವಾಗಿ ಮತ್ತು ಕೆಲ ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿದ್ದರೂ ಈ ನೆಲ ನೀಡಿದ ಕಾಣಿಕೆ ಜಗತ್ತಿನ ಇತಿಹಾಸದಲ್ಲೇ ಚಿರಸ್ಥಾಯಿಯಾಗಿ ನಿಲ್ಲುವಂಥದ್ದು. 'ನೆಲಬಿತ್ತಿ ಮುಗಿಲ ಬೆಳೆದ' ಅನೇಕ ದಾರ್ಶನಿಕರು ಈ ನೆಲದವರು. ಕ್ಷಾತ್ರತೇಜಕ್ಕೆ ಭಾಷ್ಯ ಬರೆದಂತಹ ಚಕ್ರವರ್ತಿಗಳು ಈ ನಾಡಿನಲ್ಲೇ ಮೂಡಿಬಂದದ್ದು. ವಿಶ್ವವೇ ಬೆರಳು ಕಚ್ಚುವಂತೆ ವಿಶ್ವಕ್ಕೆ ಆದರ್ಶವಾದ, ಅನುಕರಣೀಯವಾದ ಶಿಲ್ಪ, ವಾಸ್ತುಶಿಲ್ಪ, ಸಾಹಿತ್ಯ, ಸಂಗೀತ, ಚಿತ್ರಕಲೆಯಂಥ ಲಲಿತ ಕಲೆಗಳು ನಳನಳಿಸಿ ಬೆಳೆದು ಬಂದದ್ದು ಈ ಮಣ್ಣಿನಲ್ಲೇ. ಬಿಸಿಲ ಧಗೆ ಬಡತನದ ಬೇಗೆಯ ಜೊತೆ ಸದಾ ಹೋರಾಟದ ಬದುಕಿನ ನಡುವೆಯೂ, ಭವ್ಯ ಪರಂಪರೆಯ ಸಾಂಸ್ಕೃತಿಕ ಸ್ಪಂದನ ಮಾನವ ಸಂಬಂಧದ ಸೂಕ್ಷ್ಮ ಸಂವೇದನ, ಇಲ್ಲಿಯ ಜನ ಜೀವನದಲ್ಲಿ ಗುಪ್ತಗಾಮಿನಿಯಂತೆ ಹರಿದುಕೊಂಡು ಬಂದು ಜೀವನ ಸಮೃದ್ಧಿಯನ್ನೊದಗಿಸಿದೆ. ಇಂಥ ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಜನಿಸಿ ಬಂದ ಸ್ವಾಭಿಮಾನಿ ಕಲಾವಿದ ಎಂ.ಟಿ. ಭೋಪಳೆ ಚಿತ್ರಕಲಾ ಇತಿಹಾಸದ ಕ್ಷಿತಿಜದಲ್ಲಿ ಥಕ್ಕನೆ ಮಿಂಚಿ ಮರೆಯಾದ ಉಜ್ವಲ ತಾರೆ.

## ಜನನ ಮತ್ತು ಬಾಲ್ಯ ಜೀವನ

ಮಾರ್ತಂಡರಾವ್ ತಿಪ್ಪಣ್ಣ ಭೋಪಳೆ (ಎಂ.ಟಿ. ಭೋಪಲೆ) ಇವರ ಪೂರ್ವಜರು ಕಲ್ಬುರ್ಗಿ ಜಿಲ್ಲೆಯ ಶಹಪೂರ ತಾಲ್ಲೂಕಿನ 'ಸಗರ' ಗ್ರಾಮದವರು. ಸ್ವಕುಳ ಸಾಳಿ ಮತದವರಾದ ಇವರ ಮನೆತನದ ಮೂಲ ವೃತ್ತಿ ನೇಯ್ಗೆಯ ಮಗ್ಗಗಳಿಗಾಗಿ ನೂಲನ್ನು ಸಿದ್ಧಪಡಿಸಿ ಕೊಡುವುದು: ಅಂದರೆ ಉಂಕಿಗಾರ ಅಥವಾ ಪಟ್ಲೇಗಾರ ವೃತ್ತಿ. ಭೋಪಲೆಯವರ ಅಜ್ಜ ವೆಂಕಪ್ಪ (ತಂದೆಯ ತಂದೆ) ಸಗರದಿಂದ ಶಹಾಪುರಕ್ಕೆ ಬಂದು ಜೇನಪೇಟೆ (ಹಳೇಪೇಟೆ)ಯಲ್ಲಿ ನೆಲೆ ನಿಂತರು. ವೆಂಕಪ್ಪ-ಭಾಸ್ಕರ ಇವರಿಬ್ಬರು ಅಣ್ಣ ತಮ್ಮಂದಿರು; ವೆಂಕಪ್ಪನ ಮಗನೆ ತಿಪ್ಪಣ್ಣ ಅಂದರೆ ಎಂ.ಟಿ. ಭೋಪಲೆ

ಯವರ ತಂದೆ. ಅವಿವಾಹಿತರಾಗಿದ್ದ ತಿಪ್ಪಣ್ಣನವರಿಗೆ ಶಹಪೂರದಲ್ಲಿ ತಮ್ಮ ಮನೆಯವರೊಂದಿಗೆ ಯಾವುದೋ ಕಾರಣಕ್ಕೆ ವಿರಸಹುಟ್ಟಿ ಉಟ್ಟಬಟ್ಟೆಯ ಮೇಲೆ ಅಂದರೆ ಬಾರಾಕಸಿ ಅಂಗಿ, ಧೋತರ ರುಮಾಲು ಹೆಗಲ ಮೇಲೊಂದು ಕಂಬಳಿ ಈ ಉಡುಗೆಯಿಂದ ಕಾಲ್ನಡಿಗೆಯಿಂದಲೇ ಕಲಬುರ್ಗಿಗೆ ಬಂದರು.

ಮುಂದೆ ಸರ್ಕಸ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿದರು. ಮೊದಲೇ ಅಂಗಸಾಧನೆಯಲ್ಲಿ ಆಸಕ್ತಿ ಹೊಂದಿದ್ದ ತಿಪ್ಪಣ್ಣ ಸರ್ಕಸ್ ಕಂಪನಿಯವರು ಪ್ರದರ್ಶನಕ್ಕೂ ಪೂರ್ವದಲ್ಲಿ ನಡೆಸುತ್ತಿದ್ದ ತಾಲೀಮನ್ನು ಮತ್ತು ಅಂಗಾಂಗ ಸಾಧನೆಯನ್ನು ಅವರ ಚಾಕಚಕ್ಯದ ಕಸರತ್ತುಗಳನ್ನು ಉತ್ಸುಕನಾಗಿ ವೀಕ್ಷಿಸುತ್ತಿದ್ದ. ಕೆಲವೊಮ್ಮೆ ತಾನೂ ಭಾಗಿಯಾಗುತ್ತಿದ್ದ; ಸರ್ಕಸ್ ಪ್ರದರ್ಶನದ ವೇಳೆಯಲ್ಲಿ ಪೆಟ್ಟಾದವರಿಗೆ ಮಾಲಿಶ್ ಮಾಡಿ ನೋವು ನಿವಾರಿಸುವುದರ ಜೊತೆ ಮೂಳೆಗಳಿಗೆ ಧಕ್ಕೆಯಾಗಿದ್ದರೆ, ಮುರಿದಿದ್ದರೆ ಅವನ್ನು ಜೋಡಿಸುವ ಸರಿಪಡಿಸುವ ಕಲೆಯನ್ನು ಕರಗತ ಮಾಡಿಕೊಂಡ. ತಿಪ್ಪಣ್ಣ ಎಲವು ಮತ್ತು ನರರೋಗದಲ್ಲಿ ತಜ್ಞನೆನಿಸಿಕೊಂಡ. ನಂತರ ಕಲಬುರ್ಗಿಯ ಬಡಾರೋಜಾ ಪ್ರದೇಶದಲ್ಲಿ ತನ್ನ ಹಕೀಮ ವೃತ್ತಿಯನ್ನು ಆರಂಭಿಸಿದ. ಕ್ರಮೇಣ ವೃತ್ತಿ ಪರಿಣತಿಯಿಂದ ಇವರ ಹೆಸರು ನಾನಾ ಕಡೆ ಪ್ರಸಾರಗೊಂಡು ನಾಡಿನ ಮೂಲೆ ಮೂಲೆಗಳಿಂದಲೂ ಹೊರ ರಾಜ್ಯದಿಂದಲೂ ಜನರು ಉಪಚಾರಕ್ಕಾಗಿ ಇವರಲ್ಲಿಗೆ ಬರಲಾರಂಭಿಸಿದರು. ಇವರಿಗೆ ಸಿದ್ಧಿ ಪ್ರಸಿದ್ಧಿಗಳೆರಡೂ ಲಭಿಸಿ, ಆರ್ಥಿಕ ವೃದ್ಧಿಯೂ ಆಯಿತು. ಇವರ ಮನೆತನದ ಹೆಸರು 'ಹಕೀಮ' ಎಂದೂ ಬದಲಾಯಿತು. ಜನ ಈಗಲೂ ಹಕೀಮ ತಿಪ್ಪಣ್ಣನ ಮನೆಯೆಂದೇ ಗುರುತಿಸುತ್ತಾರೆ. ತಿಪ್ಪಣ್ಣನವರಿಗೆ ಚಂದ್ರಮ್ಮ (ಚಂದ್ರು ಬಾಯಿ) ನರಸಮ್ಮ (ನರಸೂಬಾಯಿ) ಎಂಬ ಇಬ್ಬರು ಪತ್ನಿಯರು. ಮೊದಲನೇ ಪತ್ನಿ ಚಂದ್ರಮ್ಮನವರಿಗೆ ರಾಮಚಂದ್ರರಾವ್ ಮಾರ್ತಂಡರಾವ್ ಇಬ್ಬರು ಗಂಡು ಮಕ್ಕಳು. ಇವರಲ್ಲಿ ೧೯೧೯ರಲ್ಲಿ ಕಲ್ಬುರ್ಗಿಯಲ್ಲಿ ಜನಿಸಿದ ಮಾರ್ತಂಡರಾವರೇ ಕಲಾವಿದ ಎಂ. ಟಿ. ಭೋಪಲೆಯವರು. ನರಸಾಬಾಯಿ ಅವರಿಗೆ ಕೇಶವರಾವ್, ನಾಗೇಶ್ವರರಾವ್, ವಿಠ್ಠಲರಾವ್ ಮೂವರು ಗಂಡು ಮಕ್ಕಳು,

ತುಳಜಾಬಾಯಿ, ಲಕ್ಷ್ಮೀಬಾಯಿ, ರುಕ್ಮಿಣಿಬಾಯಿ ಮೂವರು ಹೆಣ್ಣು ಮಕ್ಕಳಾದರು. ಅನ್ಯೋನ್ಯವಾದ ತುಂಬಿದ ಸಂಸಾರ; ಯಾವುದೇ ಸ್ವಾರ್ಥ ಸಂಕುಚಿತತೆಯಿಲ್ಲದ ನಂದಗೋಕುಲದಂತಹ ಅರವತ್ತು ಜನರ ಅವಿಭಕ್ತ ಕುಟುಂಬ. ತಂದೆಯವರಲ್ಲಿಗೆ ನಾನಾ ಭಾಗದಿಂದ ಚಿಕಿತ್ಸೆಗಾಗಿ ಬರುತ್ತಿದ್ದ ಜನರ ವೇಷ-ಭೂಷಣ, ಭಾಷೆ, ಬೆಡಗು, ಆ ಜನರ ನಿರ್ವ್ಯಾಜ್ಯ ಪ್ರೇಮ ನಿಷ್ಕಲ್ಮಷ ಮನಸ್ಸು, ಒಂದೊಂದು ಬಾಲಕ ಮಾರ್ತಂಡನ ಮೇಲೆ ಅಗಾಧ ಪರಿಣಾಮವನ್ನು ಬೀರಿದವು. ಹಾಗೆ ಜಾತ್ರೆ, ಹಬ್ಬಹರಿದಿನಗಳು, ಉತ್ಸವಗಳು ಸಂತೆ, ದೈನಂದಿನ ಜೀವನ ಇವುಗಳ ಪ್ರಭಾವದಿಂದ ಅವನ ಅಂತರಂಗದಲ್ಲಿ ಕಲಾವಿದನೊಬ್ಬ ರೂಪುಗೊಳ್ಳತೊಡಗಿದ. ನೆಲದ ಮೇಲೆ ಕಡ್ಡಿಯಿಂದ, ಪಾಟಿಯ ಮೇಲೆ ಗೋಡೆಗಳ ಮೇಲೆ ತನ್ನ ಅನಿಸಿಕೆಯನ್ನು ಕಲ್ಪನೆಯನ್ನು ರೇಖೆಗಳಲ್ಲಿ ಚಿತ್ರಿಸತೊಡಗಿದ. ಎಳವೆಯಿಂದಲೇ ಭೋಪಲೆಯವರಿಗೆ ಭಾರತೀಯ ಸಂಸ್ಕೃತಿ ಸಂಪ್ರದಾಯದ ಮೇಲೆ ಅದೇನೋ ಅರಿಯದಂಥ ವಿಶೇಷ ಆಸಕ್ತಿ. ಹಕೀಮ ಮನೆತನದವರು ಆಗ ಆರ್ಥಿಕವಾಗಿ ಅನುಕೂಲಸ್ಥರಾಗಿದ್ದುದಲ್ಲದೆ ಸಮಾಜದ ಸರ್ವ ಜನರೊಡನೆ ಬೆರೆತು ಸಹಾಯ ಸಹಕಾರ ನೀಡುತ್ತಿದ್ದುದರ ಪರಿಣಾಮವಾಗಿ ಹೆಚ್ಚು ಜನಾನುರಾಗಿಗಳಾದರು, ಗೌರವಸ್ಥರೆನಿಸಿಕೊಂಡರು. ತಂದೆಯವರ ಹಕೀಮ ವೃತ್ತಿಯನ್ನು ಮಕ್ಕಳೆಲ್ಲರೂ ತುಂಬಾ ಆಸಕ್ತಿಯಿಂದ ಕಲಿತು ನುರಿತವರಾದರು.

## ವಿದ್ಯಾಭ್ಯಾಸ

ಕಲ್ಬುರ್ಗಿಯ ನೂತನ ವಿದ್ಯಾಲಯ ಶಿಕ್ಷಣ ಸಂಸ್ಥೆ, ಪಾಠ ಪ್ರವಚನದ ಜೊತೆ ಚಾರಿತ್ರ್ಯ ನಿರ್ಮಾಣದತ್ತಲೂ ವಿಶೇಷ ಗಮನವಹಿಸುತ್ತಿದ್ದ ಶಿಕ್ಷಣ ಸಂಸ್ಥೆ; ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಯನ್ನು ಲಕ್ಷ್ಯದಲ್ಲಿರಿಸಿಕೊಂಡು ಬೋಧನೆ ಮತ್ತು ಪಠ್ಯದ ಜೊತೆಗೆ ಪಠ್ಯೇತರ ಚಟುವಟಿಕೆಗಳಿಗೂ ಆದ್ಯತೆ ನೀಡುತ್ತಿದ್ದುದರ ಪರಿಣಾಮವಾಗಿ, ವಿದ್ಯಾರ್ಥಿಗಳಲ್ಲಿದ್ದ ಸುಪ್ತ ಪ್ರತಿಭೆಗೆ ತಕ್ಕ ಅವಕಾಶ ಸಿಗುತ್ತಿತ್ತು. ಇದರಿಂದಾಗಿ ಅಲ್ಲಿನ ವಿದ್ಯಾರ್ಥಿಗಳು ಭಾಷಣ, ಕಲೆ, ಕ್ರೀಡೆ, ಸಾಹಿತ್ಯ ಸಂಗೀತ ಹೀಗೆ ಆಯಾ ಆಸಕ್ತ ಕ್ಷೇತ್ರದಲ್ಲಿ ಪರಿಣತಿಯನ್ನು ಹೊಂದುವಂತಾಗುತ್ತಿದ್ದರು. ಅಲ್ಲಿ ಕಲಿತ ವಿದ್ಯಾರ್ಥಿಗಳು

ವಿದ್ಯೆಯ ಜೊತೆ ವಿನಯ ಸಂಪನ್ನರಾಗಿ ಸೇವಾಮನೋಭಾವದವರಾಗಿ ಸಮಾಜ ಸೇವೆಗೆ ತಮ್ಮನ್ನು ಸಮರ್ಪಿಸಿಕೊಳ್ಳುತ್ತಿದ್ದರು. ಇಂಥ ಶಿಕ್ಷಣ ಸಂಸ್ಥೆಯಲ್ಲಿ ಭೋಪಳೆಯವರು ಪ್ರಾಥಮಿಕ ಮಾಧ್ಯಮಿಕ ಶಿಕ್ಷಣವನ್ನು (ಹೆಚ್.ಎಸ್.ಸಿ.ಯನ್ನು) ಮರಾಠಿ ಮತ್ತು ಇಂಗ್ಲೀಷ್ ಮಾಧ್ಯಮದಲ್ಲಿ ಮುಗಿಸಿದುದು ಅವರ ಪಾಲಿಗೆ ಬಂದ ಸೌಭಾಗ್ಯವೆಂದೇ ಪರಿಗಣಿಸಬೇಕು. ಏಕೆಂದರೆ ಆ ಶಾಲೆಯಲ್ಲಿ ಚಿತ್ರ ಕಲಾ ಶಿಕ್ಷಕರಾಗಿದ್ದ ಶ್ರೀ ಶಂಕರರಾವ್ ಆಳಂದಕರರು ಕೇವಲ ಚಿತ್ರಕಲಾ ಶಿಕ್ಷಕರಾಗಿರದೆ ಪರಿಣತ ಚಿತ್ರಕಲಾವಿದರು; ಚಿತ್ರಕಲಾ ಪ್ರೇಮಿಗಳು ಆಗಿದ್ದರು. ಶಿಷ್ಯರೋದ್ಧಾರದ ಜೊತೆಗೆ ಚಿತ್ರಕಲೆಯು ಬೆಳೆಯಲೆಂಬ ಬಯಕೆಯುಳ್ಳವರು. ಅವರಿಲ್ಲಿಗೆ ಬರುವ ಶಿಷ್ಯರಿಗೆ ತ್ರಿಕರಣ ಪೂರ್ವಕವಾಗಿ ಚಿತ್ರಕಲೆಯ ಸಕಲ ಆಯಾಮಗಳನ್ನು ಕಲಿಸಿಕೊಡುತ್ತಿದ್ದರಲ್ಲದೆ ಶಿಷ್ಯರ ಉನ್ನತ ವ್ಯಾಸಂಗಕ್ಕಾಗಿ ತಮಗೆ ಆರ್ಥಿಕವಾಗಿ ಅನಾನುಕೂಲವಿದ್ದಾಗಲೂ ಕೈಲಾದ ಧನಸಹಾಯ ಮಾಡಿ, ಕಲಾಜ್ಯೋತಿ ಬೆಳಗಿದ ಕಲಾಯೋಗಿ. ಅವರ ತ್ಯಾಗ ಹಾಗೂ ಪರಿಶ್ರಮದ ಫಲವಾಗಿ ಭೋಪಲೆ, ಎಸ್.ಎಂ. ಪಂಡಿತ, ಶಂಕರಪ್ಪ ಮಾಸ್ತರರು, ಕುಮಾರ ಚಂದ್ರಶೇಖರ, ವಿದ್ಯಾಭೂಷಣ ಮತ್ತು ಅನಸಾರಿ ಹೆರೂರಕರ್‌ರಂತಹ ಖ್ಯಾತನಾಮರು ನಾಡಿನ ಚಿತ್ರಕಲಾ ಇತಿಹಾಸದಲ್ಲಿ ಉಜ್ವಲ ಸ್ಥಾನ ಪಡೆಯುಂತಾಯಿತು.

## ಸಾಧನೆ ಮತ್ತು ಸಿದ್ಧಿ

ಚಿತ್ರಕಲೆಯಲ್ಲಿ ಅಪಾರ ಆಸಕ್ತಿ ಹೊಂದಿದ ಭೋಪಲೆ ಅವರಿಗೆ ಆಳಂದಕರರಂಥ ಗುರುಗಳು ದೊರೆತದ್ದು ಸುಯೋಗ. ಅವರ ಮಾರ್ಗದರ್ಶನದಲ್ಲಿ ಚಿತ್ರಕಲಾಭ್ಯಾಸವನ್ನು ಮುಂದುವರಿಸುತ್ತಾ ಉತ್ತಮ ಅಂಕಗಳೊಂದಿಗೆ ಪೂರ್ವಭಾವಿ ಚಿತ್ರಕಲಾ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಉನ್ನತ ಚಿತ್ರಕಲಾ ಶಿಕ್ಷಣದ ಸೌಕರ್ಯ ಈ ಭಾಗದಲ್ಲಿರದ ಕಾರಣ, ಗುರು ಆಳಂದಕರರು ತಾವು ಉನ್ನತ ಚಿತ್ರಕಲಾ ವ್ಯಾಸಂಗ ಮಾಡಿ ಬಂದ ಮುಂಬಯಿಯ ಖ್ಯಾತ ಸರ್. ಜೆ.ಜೆ. ಕಲಾ ಶಾಲೆಗೆ ಸೇರಲು ಭೋಪಲೆಯವರಿಗೆ ಸೂಚಿಸಿದರು. ಸರ್. ಜೆ.ಜೆ. ಕಲಾ ಶಾಲೆಯಲ್ಲಿ

ಭೋಪಲೆ ಅವರಿಗೆ ಉಜ್ವಲ ಭವಿಷ್ಯವಿದೆ ಎಂದು ಆಳಂದಕರರು ಮನಗಂಡಿದ್ದರು. ತಂದೆ ತಿಪ್ಪಣ್ಣನವರು ೧೯೩೬ ರಲ್ಲಿ ತೀರಿಕೊಂಡು ಹಿರಿಯಣ್ಣ ರಾಮಚಂದ್ರರಾವ್ ಸಂಸಾರದ ಜವಾಬ್ದಾರಿಗೆ ಹೆಗಲು ಕೊಟ್ಟಿದ್ದರು. ಮಾರ್ತಂಡರಾವ್ ಮುಂಬಯಿಗೆ ಚಿತ್ರಕಲಾಭ್ಯಾಸಕ್ಕಾಗಿ ತೆರಳುವ ಇಚ್ಛೆಯನ್ನು ಮನೆಯವರ ಮುಂದಿಟ್ಟಾಗ ತಮ್ಮ ಚಿಕ್ಕವನೆಂಬ ಕಕ್ಕುಲತೆಯಿಂದಲೋ ದೂರದ ಊರಲ್ಲಿ ಹೇಗಿರುವನೆಂಬ ಅಳುಕಿನಿಂದಲೋ ಅಣ್ಣ ರಾಮಚಂದ್ರರಾವ್ ಮತ್ತು ಅವರ ತಾಯಿ ಹಾಗೂ ಪರಿವಾರದವರು ಹಿಂದೇಟು ಹಾಕಿದರೂ ತಮ್ಮನ ಪ್ರಬಲವಾದ ಚಿತ್ರಕಲಾಕಾಂಕ್ಷೆಗೆ ಗುರು ಆಳಂದಕರರ ಸಮಜಾಯಿಷಿಗೆ ಒಪ್ಪಿ ಮನೆಯವರು ಭೋಪಲೆಯವರಿಗೆ ಮುಂದಿನ ಅಭ್ಯಾಸಕ್ಕಾಗಿ ಮುಂಬಯಿಗೆ ಹೋಗಲು ಅನುಮತಿಸಿದರು. ತಂದೆಯ ಅಗಲಿಕೆಯ ಯಾವೊಂದು ನೋವಿನೆಳೆ ಪರಿವಾರದವರ ಮೇಲೆ ಪರಿಣಾಮವಾಗದಂತೆ ಹಿರಿಯಣ್ಣ ರಾಮಚಂದ್ರರಾವ್ ಮುತುವರ್ಜಿ ವಹಿಸಿದ್ದ. ಅವರ ತ್ಯಾಗ ಹಾಗೂ ಪರಿಶ್ರಮ ಉಳಿದ ಸಹೋದರ ಸಹೋದರಿಯರ ಮುಂದಿನ ಬದುಕಿಗೆ ಭದ್ರತೆಯನ್ನು ಒದಗಿಸಿತ್ತು. ಭೋಪಲೆಯವರು ಹಿರಿಯಣ್ಣನ ಉದಾರತೆಯಲ್ಲಿ ಉದ್ಧಾರವಾದವರು.

ಆಗಲೇ ಸಮಾಜದಲ್ಲಿ ಗಣ್ಯಸ್ಥಾನ ಹೊಂದಿದ್ದ ರಾಮಚಂದ್ರರಾವ್ ಹಕೀಮ್ (ಭೋಪಲೆ) ರವರಿಗೆ ನಗರದ ಅನೇಕ ಗಣ್ಯ ವ್ಯಾಪಾರಿಗಳೊಡನೆ ಉತ್ತಮ ಗೆಳೆತನವಾಗಿತ್ತು. ಆ ಪೈಕಿ ರಾಮಚಂದ್ರಪ್ಪ ಜಾಜಿ, ಶಿವಶರಣಪ್ಪ ಸ್ವಾದಿಯವರು. ರಾಮಚಂದ್ರರಾವ್ ಭೋಪಳೆಯವರಿಗೆ ತುಂಬಾ ಬೇಕಾದವರು. ಇವರ ನೆರವಿನಿಂದ ಅಣ್ಣ ರಾಮಚಂದ್ರರಾವ್, ಮಾರ್ತಂಡರಾವ್ ಭೋಪಲೆಯವರನ್ನು ಮುಂಬಯಿಗೆ ಕಳಿಸಲು ಮುಂದಾದರು.

ಈ ಗೆಳೆಯರಿಗೆ ತುಂಬಾ ಪರಿಚಿತರಾದ, ಮೂಲ ಕಲಬುರ್ಗಿಯವರೇ ಆದ ಶ್ರೀ ಪರಶುರಾಮ ಜಾಜಿಯವರು ಮುಂಬಯಿಯ ಹಿಂದೂ ಕಾಲನಿಯಲ್ಲಿ ಅಡತ್ ದುಕಾನ್ ಇಟ್ಟಿದ್ದರು. (ಕಮಿಶನ್ ಏಜೆಂಟರಾಗಿದ್ದರು) ಕಲಬುರ್ಗಿಯಿಂದ ಬಂದ ಹುಡುಗನೆಂಬ

ಅಭಿಮಾನದಿಂದ ಚಿತ್ರಕಲಾಕಾಂಕ್ಷಿ ಮಾರ್ತಂಡರಾವನಿಗೆ ತಮ್ಮ ಅಂಗಡಿಯಲ್ಲೇ ವಸತಿ ಸೌಕರ್ಯ ಕಲ್ಪಿಸಿಕೊಟ್ಟರು.

೧೯೩೭ರಲ್ಲಿ ಜೆ.ಜೆ. ಕಲಾ ಶಾಲೆಗೆ ಸೇರಿದಾಗ ಭೋಪಲೆಯವರಿಗೆ ಹದಿನಾರು ವರ್ಷ ವಯಸ್ಸು. ಸರ್.ಜೆ.ಜೆ. ಕಲಾಶಾಲೆಯಲ್ಲಿ ಕ್ರಮಬದ್ಧ ಶಿಕ್ಷಣ, ಅಲ್ಲಿ ಪರಫೆಕ್ಟ್ ಕ್ರಾಫ್ಟ್ ಮಾಡಿಸುತ್ತಿದ್ದರು. ಇದ್ದಿಲು ಕಡ್ಡಿಯಿಂದ ಚಿತ್ರ ರಚಿಸುವುದು, ಪುಡಿ ಬಣ್ಣಗಳಿಂದ ಛಾಯಾ ಪ್ರಕಾಶವನ್ನು ವ್ಯಕ್ತಗೊಳಿಸುವುದು, ದೃಗ್ದರ್ಶನ, ಬಣ್ಣಗಳಲ್ಲಿ ಭಾವಚಿತ್ರ, ಸ್ಥಿರ ಚಿತ್ರ (ಸ್ಟಿಲ್ ಲೈಫ್) ಜಲ ಮತ್ತು ತೈಲವರ್ಣಗಳನ್ನು ಬಳಸುವ ವಿಧಾನ, ದೇಹ ರಚನಾಶಾಸ್ತ್ರ, ನ್ಯೂಡ್‌ಸ್ಟಡಿ, ನೈಜ ಚಿತ್ರಣ ರಚನೆ, ರೇಖೆಗಳ ಸಾಂದ್ರತೆ, ಬಣ್ಣಗಳ ಛಾಯಾಗಳತ್ತ ಗಮನ, ಈ ಎಲ್ಲಾ ವಿಷಯಗಳನ್ನು ನಾಲ್ಕು ವರ್ಷಗಳ ಅವಧಿಯಲ್ಲಿ ಕಲಿಸಿಕೊಡಲಾಗುತ್ತಿತ್ತು. ಸೃಜನಶೀಲತೆ ಮತ್ತು ಸ್ವಂತಿಕೆಯನ್ನು ರೂಢಿಸಿಕೊಂಡು ನವ್ಯ ಕಲೆಯ ತಂತ್ರ ಹಾಗೂ ಕಲಾಪಂಥದ ಬಗ್ಗೆ ಹೆಚ್ಚಾಗಿ ತಿಳಿದುಕೊಳ್ಳಲು ಪ್ರೇರೇಪಿಸುತ್ತಿದ್ದ ಕಲಾ ಶಾಲೆ ಅದು.

ಭೋಪಲೆಯವರು ಸತತ ಪರಿಶ್ರಮದಿಂದ ಶ್ರದ್ಧಾ ನಿಷ್ಠೆಯಿಂದ ಚಿತ್ರಕಲೆಯ ಎಲ್ಲಾ ಆಯಾಮಗಳಲ್ಲಿ ಪರಿಣತಿಯನ್ನು ಹೊಂದಿ೧೯೪೧ರಲ್ಲಿ ಡಿಪ್ಲೋಮಾ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಜೆ. ಜೆ. ಕಲಾ ಶಾಲೆಗೂ, ಕಲಬುರ್ಗಿಗೂ ಹೆಮ್ಮೆ ಹಾಗೂ ಕೀರ್ತಿಯನ್ನೂ ತಂದಾಗ ಗುರು ಆಳಂದಕರರು ಮತ್ತು ಭೋಪಲೆ ಪರಿವಾರದವರು, ಗೆಳೆಯರು, ಸಂತಸ, ಸಮಾಧಾನ, ಮತ್ತು ಅಭಿಮಾನವನ್ನು ಹೊಂದಿದರು. ಇವರ ಕುಂಚದ ಚಾಕಚಕ್ಯತೆ ವರ್ಣಗಳ ಬಳಕೆಯಲ್ಲಿನ ಪ್ರಬುದ್ಧತೆ ಮತ್ತು ಪ್ರತಿಭೆಗೆ ಮೆಚ್ಚಿ ಅದೇ ಕಲಾಶಾಲೆಯವರು ೫೦೦ ರೂ.ಗಳ ಫೆಲೋಶಿಪ್ ನೀಡಿ ಗೌರವಿಸಿದರಲ್ಲದೆ, ಅಲ್ಲಿಯೇ ಹಂಗಾಮಿ ಪ್ರಾಧ್ಯಾಪಕರೆಂದೂ ನೇಮಿಸಿಕೊಂಡರು. ಅಧ್ಯಯನದ ಅವಧಿಯಲ್ಲೇ ಎಂ. ಟಿ. ಭೋಪಲೆಯವರು ಕಲಾಕೃತಿಗಳ ರಚನೆಗೆ ತೊಡಗಿದ್ದರು.

೧೯೩೯ರಲ್ಲಿ ನಡೆದ ಡಾಲ್ಲಿ ಕುರ್ಸೆಟಜಿ ಸ್ಪರ್ಧೆಯಲ್ಲಿ ಇವರ ಕಲಾಕೃತಿಗೆ ಬಂದ ಪ್ರಥಮ ಬಹುಮಾನ ಭೋಪಲೆಯವರು ಆತ್ಮವಿಶ್ವಾಸದಿಂದ ಉತ್ಸುಕರಾಗಿ ಹೆಚ್ಚಿನ ಕೃತಿ ರಚನೆಗೆ ತೊಡಗಲು ಪ್ರೇರೇಪಿಸಿತು.

ಮುಂಬಯಿಯ ಕ್ರಿಸ್ಟೀಜ್ ಸೊಸೈಟಿಯವರು ಏರ್ಪಡಿಸಿದ್ದ ಕಲಾ ಸ್ಪರ್ಧೆಯಲ್ಲೂ ಭೋಪಲೆಯವರ 'ಕಾಂಪೋಜಿಷನ್ ಎಂಬ ಚಿತ್ರ ಪ್ರಥಮ ಸ್ಥಾನ ಪಡೆಯಿತು. ಇದೇ ಅವಧಿಯಲ್ಲಿ ಸಮಾನ ಅಭಿರುಚಿಯುಳ್ಳ ಕೆ.ಸಿ. ರೆಡ್ಡಿ, ಭೋಪಲೆ, ಮಜೀದ್, ಸಿ.ವಾಯ್. ಕುಲಕರ್ಣಿ, ಸಿ. ಬಾಪ್ಟಿಸ್ಟಾ ಈ ಚಿತ್ರ ಕಲಾವಿದ ಗೆಳೆಯರ ಗುಂಪೊಂದು ಅಸ್ತಿತ್ವಕ್ಕೆ ಬಂದಿತು.

ಭಾರತದಲ್ಲಿ ನವ್ಯ ಕಲೆಯ ಆರಂಭದ ಕಾಲವದು. ಈ ಗುಂಪು ಪ್ರಗತಿಪರ ಗುಂಪೆಂದು (ಪ್ರೊಗ್ರೆಸ್ಸಿವ್ ಗ್ರೂಪ್) ಗುರುತಿಸಿಕೊಂಡು ಹೆಸರು ಮಾಡಿತ್ತು. ಇವರಿಗೆ ಸರಿಸಮಾನವಾದ ಇಂದಿನ ಅಂತಾರಾಷ್ಟ್ರೀಯ ಖ್ಯಾತಿಯ ಮಹ್ಮದ್ ಫಿದಾ ಹುಸೇನ್ (ಎಂ.ಎಫ್. ಹುಸೇನ್) ಮತ್ತು 'ಆರಾ' ಗೆಳೆಯರ ಗುಂಪೂ ಅಸ್ತಿತ್ವಕ್ಕೆ ಬಂದಿತ್ತು. ಭೋಪಲೆಯವರು ತಮ್ಮ ಗೆಳೆಯರ ಗುಂಪಿನೊಂದಿಗೆ ಮತ್ತು ವೈಯಕ್ತಿಕವಾಗಿಯೂ ಅನೇಕ ಪ್ರದರ್ಶನಗಳನ್ನೇರ್ಪಡಿಸಿ ಹೆಸರು ಪಡೆದುಕೊಂಡರು. ಆಗಿನ ಸಮಕಾಲೀನ ಕಲಾವಿದರಲ್ಲಿ ಭೋಪಲೆಯವರು ತುಂಬಾ ಪ್ರಭಾವಶಾಲಿ ಹಾಗೂ ಗೌರವಾನ್ವಿತ ಕಲಾವಿದರೆನಿಸಿಕೊಂಡಿದ್ದರು. ಈ ಗೆಳೆಯರ ಗುಂಪು ೧೯೫೧ರಲ್ಲಿ 'ಬಾಂಬೆ ಗ್ರೂಪ್ ಆಫ್ ಕಾಂಟೆಂಪರರಿ ಇಂಡಿಯನ್ ಆರ್ಟಿಸ್ಟ್ಸ್ ಎಂಬ ಹೆಸರಿನಲ್ಲಿ ಮುಂಬಯಿಯಲ್ಲಿ ಚಿತ್ರಕಲಾ ಪ್ರದರ್ಶನವನ್ನೇರ್ಪಡಿಸಿದಾಗ ಕಲಾವಿದರ ಕಿರು ಪರಿಚಯದ ಪುಸ್ತಿಕೆಯಲ್ಲಿ ಆಗಿನ ಜೆ.ಜೆ. ಕಲಾಶಾಲೆಯ ನಿರ್ದೇಶಕರಾಗಿದ್ದ ಚಾರ್ಲಸ್ ಜೆರಾರ್ಡ್‌ರವರು ಆ ತರುಣ ಕಲಾವಿದರನ್ನು ಕುರಿತು ಈ ರೀತಿಯಾಗಿ ಅಭಿಮಾನದಿಂದ ಪರಿಚಯಿಸಿಕೊಟ್ಟಿದ್ದಾರೆ:

'ನಮ್ಮ ಪರಂಪರೆಯ ಯುವಕರು' (ಅವರ್ ಯಂಗ್ ಕಾಂಟೆಂ ಪರರೀಜ್)

''ಕಚ್ಚಾಟದ ಈ ಯುಗದಲ್ಲಿ ನಮ್ಮ ಸಮಕಾಲೀನ ಯುವ ಪೀಳಿಗೆಯ ಕಲಾಕಾರ ನಿಜವಾಗಿಯೂ ಸ್ವಾಗತಾರ್ಹ ವ್ಯಕ್ತಿ. ಜಾಗತಿಕ ಔದ್ಯಮೀಕರಣವು ಕಲಾಕಾರರ ಕಲಾನೈಪುಣ್ಯವನ್ನು ಭ್ರಷ್ಟಗೊಳಿಸಿದೆ. ಇದಕ್ಕೆ ಚಿತ್ರಕಲಾಕಾರರು ಹೊರತಾಗಿಲ್ಲ.

'ಸಮಾನ ಸಾಂಸ್ಕೃತಿಕ ಮನೋಭಾವ ಪಡೆಯುವ ಸಾಮಾನ್ಯ ಇಚ್ಛೆಯನ್ನು

ಪುನಃ ಜಾಗೃತಗೊಳಿಸಲು ಬಹಳಷ್ಟು ಶ್ರಮಿಸಬೇಕಾಗಿದೆ. ಬಾಳನ್ನು ಬೆಳಗಿಸುವ ಇಂತಹ ಪ್ರಯತ್ನದಲ್ಲಿ ಸಮಕಾಲೀನ ಯುವ ಕಲಾವಿದರು ಮುಂಚೂಣಿಯಲ್ಲಿದ್ದಾರೆ.

ಸಾರ್ವತ್ರಿಕವಾದ, ಉದಾತ್ತ ಸಾಂಸ್ಕೃತಿಕ ಮನೋಭಾವವನ್ನು ನಾವು ಪಡೆಯಬೇಕಾದಲ್ಲಿ ಇಂತಹ ಕಲಾವಿದರ ಅವಶ್ಯಕತೆ ನಮಗಿದೆ. ಮಾರ್ಗದರ್ಶನಕ್ಕಾಗಿ ನಾವು ಈ ಯುವ ಪೀಳಿಗೆಯನ್ನು ಅವಲಂಬಿಸಿದ್ದೇವೆ. ಉದಾತ್ತ ಸಾಂಸ್ಕೃತಿಕ ದೃಷ್ಟಿಕೋನ ಬೆಳೆಸಿಕೊಳ್ಳಲು ಬಹಳಷ್ಟು ಶ್ರಮದ ಅವಶ್ಯಕತೆ ಇದೆ. ಭಾರತೀಯ ಯುವ ಕಲಾವಿದರು ಈ ಕೆಲಸಕ್ಕೆ ಅತ್ಯಂತ ಯೋಗ್ಯರು.

ವ್ಯಕ್ತಿ ವಿಶೇಷ ದೃಷ್ಟಿಕೋನದ ತಮ್ಮ ಅಭಿವ್ಯಕ್ತಿಯನ್ನು ಚಿತ್ರಕಲೆಯ ಮೂಲಕ ಜನರೆದುರು ಪ್ರದರ್ಶಿಸಲೋಸುಗ ಕಟ್ಟಿಕೊಂಡ ಒಂದು ಕಲಾಮೇಳದ ಐದು ಜನ ಕಲಾಕಾರರ ಕೃತಿಗಳು ಇಲ್ಲಿ ಪ್ರದರ್ಶಿಸಲ್ಪಟ್ಟಿವೆ. ಒಂದೇ ಗುರಿಯುಳ್ಳ ಸಮರಸವಾಗಿ ಕೂಡಿ ದುಡಿಯುತ್ತಿರುವ ಬ್ರಾಹ್ಮಣ, ಬ್ರಾಹ್ಮಣೇತರ, ಮಹ್ಮದೀಯ - ಕ್ರಿಶ್ಚಿಯನ್ನರಿಂದ ಕೂಡಿದ ಈ ಕಲಾಕಾರರ ಒಕ್ಕೂಟ ಸಮಕಾಲೀನ ಕಲಾ ಚಳುವಳಿಯನ್ನು ಬಲಪಡಿಸುವಲ್ಲಿ ತನ್ನ ಸಾಮರ್ಥ್ಯವನ್ನು ತೋರಿದೆ.

ಈ ಕಲಾವಿದರ ಗುಂಪು ವ್ಯರ್ಥದ ಚರ್ಚೆ, ವಾದ - ವಿವಾದದಲ್ಲಿ ತೊಡಗದೆ, ಸೃಜನ ಕಾರ್ಯದಲ್ಲಿ ತಲ್ಲೀನರಾಗಿರಲು ಹೆಚ್ಚು ಇಷ್ಟಪಡುತ್ತದೆ. ವಿಮರ್ಶೆಗೆ ಅವರು ಹೆಚ್ಚು ಮಹತ್ವ ಕೊಡುವುದಿಲ್ಲ. ಜನಾಭಿಪ್ರಾಯ ಮೆಚ್ಚಿಕೆಯದಾಗಲಿ, ತೆಗಳಿಕೆಯದಾಗಲಿ, ಸಮಚಿತ್ತದಿಂದ ಕಾಣುವಷ್ಟು ಪ್ರಬುದ್ಧರಿವರು.

ಮೆಚ್ಚಿಕೆ, ಸ್ವಾಗತಾರ್ಹ. ಟೀಕೆಯೂ ಸ್ವಾಗತಾರ್ಹವೆ. ಅದು ಕಲಾವಿದನನ್ನು ಪ್ರಚೋದಿಸುತ್ತದೆ. ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸದಿರುವುದು ಕಲಾಕಾರರಿಗೆ ಮಾರಕವಾದುದು. ಈ ಕಲಾವಿದರ ಬೆಳವಣಿಗೆಯನ್ನು ನಾನು ವೈಯಕ್ತಿಕವಾಗಿ ಕಂಡಿದ್ದೇನೆ. ಚಿತ್ರಕಲೆಯಲ್ಲಿ ತಮ್ಮನ್ನು ತಾವು ಅಭಿವ್ಯಕ್ತಿಸುವ ಸಾಮರ್ಥ್ಯ ಪಡೆಯಲು ದಣಿವಿಲ್ಲದೆ

ದುಡಿಯುತ್ತಿರುವುದನ್ನು ಕಂಡು ಮೆಚ್ಚಿದ್ದೇನೆ. ಎಷ್ಟೋ ಸಲ ಅತೀವ ಆರ್ಥಿಕ ಸಂಕಟ ಪರಿಸ್ಥಿತಿಯಲ್ಲೂ ಕಲೆಗಾಗಿ ಇರುವ ತಮ್ಮ ಆಂತರಿಕ ಒತ್ತಡದಿಂದ ಪ್ರೇರಿತರಾಗಿ ಈ ದಿಸೆಯಲ್ಲಿ ಮುನ್ನುಗ್ಗಿದ್ದಾರೆ.

''ಇವರ ಭವಿಷ್ಯವನ್ನು ನಾವು ಕುತೂಹಲದಿಂದ ಕಾಯೋಣ. ಅವರ ಕೃತಿಗಳನ್ನು ಕೊಂಡು ಅವರ ಅಭಿವ್ಯಕ್ತಿ ಸಾಮರ್ಥ್ಯವನ್ನು ಪ್ರೋತ್ಸಾಹಿಸೋಣ. ಈ ಚಿತ್ರಗಳನ್ನು ಕೊಳ್ಳುವುದರಿಂದ ಅವುಗಳು ನಮ್ಮ ಜೀವನದ ಒಡನಾಡಿಗಳಾಗುತ್ತವೆ. ಈ ಚಿತ್ರಗಳ ಮೇಲೆ ನಮೂದಿಸಿದ ಬೆಲೆಗಳು ಕಲಾಪ್ರೇಮಿಗಳ ಕ್ರಯಶಕ್ತಿಗನುಗುಣವಾಗಿವೆ ಎಂದು ನಾನು ಭಾವಿಸುವೆ'' (ನಿರ್ದೇಶಕ ಜೆ.ಜೆ. ಕಲಾಶಾಲೆ, ಮುಂಬಯಿ).

ಇದೇ ರೀತಿಯ ಪ್ರಶಂಸೆ ಮತ್ತು ಪ್ರೋತ್ಸಾಹ ಭೋಪಲೆಯವರು ಅನೇಕ ಕಡೆಗೈದ ಚಿತ್ರಕಲಾ ಪ್ರದರ್ಶನಗಳಿಗೆ ಸಿಗುತ್ತಿತ್ತು. ಸದಾ ಚಿತ್ರಕಲೆಯ ಕುರಿತು ಚಿಂತನೆ ಮತ್ತು ರಚನೆಯಲ್ಲಿ ಕಾಲ ಕಳೆಯುತ್ತಿದ್ದ ಅವರು ಜೈನ ಮತ್ತು ಬೌದ್ಧ, ಅಜಂತ, ಭಾಘ, ರಜಪೂತ, ಕಾಂಗ್ರಾ, ಮೊಗಲ್ ಇನ್ನಿತರ ಕಲಾಶೈಲಿಗಳಲ್ಲಿರುವ ರೇಖಾ ಲಾಲಿತ್ಯ, ರಚನಾ ಕೌಶಲ್ಯ, ಸಂಯೋಜನೆ, ಬಣ್ಣಗಳ ಬಳಕೆ, ಆಯಾ ಕಾಲಘಟ್ಟದಲ್ಲಿ ರಚಿತವಾದ ಚಿತ್ರಗಳ ಧ್ಯೇಯ ಧೋರಣೆ ಒಂದೊಂದನ್ನೂ ಕೂಲಂಕಷವಾಗಿ ಅಭ್ಯಸಿಸಿದರು. ಹೀಗಾಗಿ ಪಾಶ್ಚಾತ್ಯ ಶೈಲಿಯ ಶಿಕ್ಷಣವನ್ನು ಪಡೆದಿದ್ದರೂ ಅದರ ಪ್ರಭಾವಕ್ಕೊಳಗಾಗದ ಭೋಪಲೆಯವರು ಪೌರಸ್ತ್ಯ ಭಾರತೀಯ ಕಲಾ ಸಂಪ್ರದಾಯದತ್ತ ಒಲವು ತೋರಿದರು, ತಮ್ಮ ಕೃತಿಯಲ್ಲೂ ಅಳವಡಿಸಿಕೊಂಡರು. ಚಿಂತನ ಅಧ್ಯಯನದ ಜೊತೆ ಅನುಭವದ ಪರಿಧಿ ವಿಸ್ತರಿಸಿದಂತೆ, ಭೋಪಲೆಯವರಿಂದ ಸತ್ವಪೂರ್ಣ ಕೃತಿಗಳು ಹೊರಬರಲಾರಂಭಿಸಿದವು. ಪ್ರಕೃತಿ ಚಿತ್ರ, ರೇಖಾ ಚಿತ್ರ, ಭಾವಚಿತ್ರ, ಸಂಯೋಜನಾ ಚಿತ್ರದ ಜೊತೆಗೆ ಪೆನ್ಸಿಲ್ ಡ್ರಾಯಿಂಗ್, ಇಂಡಿಯನ್ ಇಂಕ್‌ನಿಂದ ರಚಿತವಾದ ಕಪ್ಪುಬಿಳುಪು ಚಿತ್ರಗಳು, ಅವರ ಸೂಕ್ಷ್ಮ ಸಂವೇದನೆ ಮತ್ತು ವೈಚಾರಿಕ ಮನೋಭಾವದೊಂದಿಗೆ ಮೂಡಿ ಬಂದು ಎಲ್ಲರ ಪ್ರಶಂಸೆಗೆ ಪಾತ್ರವಾದವು. ಚಿತ್ರಗಳಲ್ಲಿ ವಯಸ್ಸಿಗನುಗುಣವಾಗಿ ಮಾರ್ಪಡುವ ಮುಖಚರ್ಯೆ, ಬಣ್ಣ, ಗಡುಸು, ಮೃದುತ್ವ, ಕೋಮಲತೆ, ಲಾಸ್ಯ, ಚಿಂತೆ

ಹಾಗೂ ಗಂಭೀರ ಭಾವಗಳನ್ನು ವಸ್ತು ವ್ಯಕ್ತಿಗಳ ಗುಣ ಸ್ವಭಾವಗಳನ್ನು ಬಣ್ಣ ಬೆಳಕಿನಲ್ಲಿ ಸಶಕ್ತವಾಗಿ ಹಿಡಿದಿಡುವ ಕಲಾಗಾರುಡಿಗನಾದ ಭೋಪಲೆ.

''ಚಿತ್ರವಾಗಲಿ ಶಿಲ್ಪವಾಗಲಿ ಅಲಂಕಾರಿಕ ವಸ್ತುವಲ್ಲ. ಅದು ಒಬ್ಬ ಕಲಾವಿದನ ಸೃಜನಶೀಲತೆಯ ಕುರುಹು. ಅದು ಭಾವ ಪ್ರಚೋದಕವಾಗಿರಬೇಕೆಂದು'' ಭೋಪಲೆ ಹೇಳುತ್ತಿದ್ದರು. ಹೀಗಾಗಿ ಪೌರಾಣಿಕ ಕಥಾಚಿತ್ರಗಳಿಗಿಂತ ಜನಸಾಮಾನ್ಯರ ದೈನಂದಿನ ಬದುಕಿನ ಚಿತ್ರಗಳನ್ನು ತುಂಬಾ ಭಾವ ಪ್ರಧಾನವಾಗಿ ಚಿತ್ರಿಸಿದರು. ಹಾಗೆಯೇ ಶ್ರೇಷ್ಠ ಕಲೆಗಳ ಪ್ರಧಾನ ಗುಣ ಸರಳತೆ. ಕಲೆಗಳು, ಭಾವವನ್ನು ಪ್ರಕಟಿಸಲು ಸಮರ್ಥವಾಗಿರಬೇಕೆ ವಿನಃ, ಅಲಂಕಾರ, ತಂತ್ರಗಳ ಒಣ ಪಾಂಡಿತ್ಯದ ಪ್ರದರ್ಶನಗಳ ವಿಜೃಂಭಣೆಯಲ್ಲಿ ಕಲೆ ಸೊರಗುವಂತಾಗಬಾರದು. ಕಲಾಕೃತಿಗಳು ಕಲೆಯ ಆತ್ಮವನ್ನು ಎತ್ತಿ ತೋರಿಸುವ ಕೆಲಸ ಮಾಡಬೇಕೇ ವಿನಃ ಮಾರಾಟದ ಸರಕಾಗಬಾರದು. ಕಲೆಗಾಗಿ ಕಲೆ ಇರಬೇಕೆ ವಿನಃ ಹಣಕ್ಕಾಗಿ ಕಲೆಯಾಗಬಾರದು. ಆರ್ಟ್ ಫಾರ್ ಆರ್ಟ್ ಸೇಕ್; ನಾಟ್ ಫಾರ್ ಮನಿ ಸೇಕ್. ಅವರ ಸಮಕಾಲೀನ ಕೆಲ ಕಲಾವಿದರು ಹಣಕ್ಕಾಗಿ ಕಲಾತತ್ವಗಳಿಗೆ ತಿಲಾಂಜಲಿಯನ್ನಿತ್ತಿರುವುದನ್ನು ಕಂಡು ಭೋಪಲೆಯವರು ಖೇದಪಡುತ್ತಿದ್ದರು.

ಕಲೆಗಾಗಿ ಕಲೆಯೆಂಬ ಹಿನ್ನೆಲೆಯಲ್ಲಿ ರೂಪುಗೊಂಡ ಭೋಪಲೆಯವರ ಚಿತ್ರಗಳಿಗೆ ಬೆಲೆ ಮತ್ತು ಬೇಡಿಕೆ ಬರಲಾರಂಭಿಸಿದಂತೆ ಪ್ರಚಾರ ಹಾಗೂ ಪ್ರಸಿದ್ಧಿಯೂ ಲಭಿಸಿತು. ಅವರು ಕಲೆಯನ್ನು ಕರಗತ ಮಾಡಿಕೊಂಡಂತೆ, ಸದ್ಗುಣಗಳನ್ನೂ ಅಂತರ್ಗತ ಮಾಡಿಕೊಂಡಿದ್ದರು. ಇದರಿಂದ ಅನೇಕ ಗಣ್ಯಮಾನ್ಯರು, ವಿದೇಶಿ ಕಲಾವಿದರು, ಕಲಾಪ್ರೇಮಿಗಳು, ಚಲನಚಿತ್ರ ನಿರ್ದೇಶಕರು, ಚಿತ್ರನಟರು ಅವರ ಸ್ನೇಹ ಬಯಸಿ ಸಂದರ್ಶನಕ್ಕಾಗಿ ಬರುತ್ತಿದ್ದರು. ಅವರ ಪೈಕಿ ಆಗಿನ ಸಿನಿಮಾ ಜಗತ್ತಿನ ಐತಿಹಾಸಿಕ ಚಿತ್ರಗಳಲ್ಲಿ ಬಾಬರ್ ಮತ್ತು ಅಕ್ಬರ್ ಪಾತ್ರದಿಂದ ಖ್ಯಾತರಾಗಿದ್ದ ಚಂದ್ರಮೋಹನ್‌ರೂ ಒಬ್ಬರು.

ಈ ಅವಧಿಯಲ್ಲಿ ಭೋಪಲೆಯವರು 'ಬೀತೇ ದಿನ್' ಎಂಬ ಹಿಂದಿ ಚಲನಚಿತ್ರದ ಸೆಟ್ ತಯಾರಿಸಿ ಉತ್ತಮ ಕಲಾನಿರ್ದೇಶಕರೆನಿಸಿಕೊಂಡರು (ಆರ್ಟ್ ಡೈರೆಕ್ಟರ್). ಮುಂಬಯಿಯ ದಾದರ್‌ದಲ್ಲಿನ ಲೇಡಿ ಜೆಮ್‌ಶೇಟ್‌ಜಿ ರಸ್ತೆಯಲ್ಲಿನ ಪಾರಕ್ ಮಹಲ್‌ದಲ್ಲಿ ''ಸ್ಟುಡಿಯೋ ಇಂಡಸ್ಟ್ರೀಸ್ ಆರ್ಟ್'' ಎಂಬ ಹೆಸರಿನ ಸ್ಟುಡಿಯೋ ತೆರೆದು ಅಲ್ಲಿ ತಮ್ಮ ಕೃತಿ ರಚನೆಗೆ ತೊಡಗಿದರು. ಶಿವಾಜಿ ಪಾರ್ಕ್‌ನಲ್ಲಿ ವಾಸಕ್ಕಾಗಿ ಪಗಡಿಯ ಮೇಲೆ ಮನೆಯೊಂದನ್ನು ಪಡೆದುಕೊಂಡರು. ಕಾರ್ಡರ್ ಸ್ಟುಡಿಯೋದ ಹೆಸರಿನಡಿ ಅವರು ಅನೇಕ ಕೃತಿ ರಚನೆ ಮಾಡಿದ್ದುಂಟು. ಭೋಪಲೆಯವರ ಕರ್ತೃತ್ವ ಶಕ್ತಿಯು ಅನೇಕ ಸಂಘ ಸಂಸ್ಥೆಗಳ ಗಮನ ಸೆಳೆಯಿತು. ವಿದೇಶಿ ಸಹಯೋಗದೊಡನೆ ವ್ಯಾಪಾರ ಆರಂಭಿಸಿದ್ದ (ಫಾರೆನ್ ಕೊಲ್ಯಾಬರೇಶನ್) ಮುಂಬಯಿಯ ಗೋಲ್ಡ್‌ಫೀಲ್ಡ್ ಲೆದರ್ ಕಂಪನಿಯವರು ಭೋಪಲೆಯವರಿಗೆ ತಮ್ಮ ಕಂಪನಿಗಾಗಿ ನಾನಾ ವಿಧದ ಡಿಜೈನ್‌ಗಳನ್ನು ರೂಪಿಸಿಕೊಡಲು ವಿನಂತಿಸಿಕೊಂಡಾಗ ಆ ಕೆಲಸವನ್ನು ನಿರ್ವಹಿಸಿ ಸೈ ಎನಿಸಿಕೊಂಡರು. ಅವರು ರಚಿಸಿದ ವಿನ್ಯಾಸಗಳು ದೇಶ ಮತ್ತು ವಿದೇಶದ ಗಮನ ಸೆಳೆದು ಕಂಪನಿಗೆ ಬೇಡಿಕೆ ಹೆಚ್ಚಾಗಿ, ಹೆಚ್ಚಿನ ಆದಾಯ ತರುವಂತಾಯಿತು.

ಪಂಜಾಬ್, ರಾಜಮಹಾರಾಜರ ವೈಭವದ, ಕಲಾಪ್ರೇಮಿಗಳ ನೆಲ. ಅಲ್ಲಿಯ ಜನ ತಮಗಾಗಿ ಚಿತ್ರ ರಚಿಸಿಕೊಡಲು ಮುಂಬಯಿಯ ಜೆ.ಜೆ. ಕಲಾಶಾಲೆಯ ಪ್ರತಿಭಾವಂತರನ್ನು ಆಹ್ವಾನಿಸಿ, ಚಿತ್ರರಚಿಸಿದ ಕಲಾವಿದರಿಗೆ ಸೂಕ್ತ ಸಂಭಾವನೆ ಜೊತೆಗೆ ಸಮ್ಮಾನ ಮಾಡಿ ಕಳಿಸುತ್ತಿದ್ದರು. ಇಂಥ ಒಂದು ಅವಕಾಶ ಭೋಪಲೆಯವರಿಗೂ ಲಭ್ಯವಾಗಿತ್ತು. ಮುಂಬಯಿಯ ಮೆಟ್ರೋ ಚಿತ್ರ ಮಂದಿರದಲ್ಲಿ ಭೋಪಲೆಯವರು ಬಿಡಿಸಿದ ಭಿತ್ತಿಚಿತ್ರಗಳು (ಫ್ರೆಸ್ಕೋ ಪೇಂಟಿಂಗ್ಸ್) ಅವರ ಕಲಾಪರಿಣತಿಗೆ ಸಾಕ್ಷಿಯಾಗಿವೆ. ನಿಸರ್ಗದಲ್ಲಿಯ ಸುಂದರತೆಯನ್ನು ಯಥಾವತ್ತಾಗಿ ತಮ್ಮ ಚಿತ್ರದಲ್ಲಿ ಸಾಕಾರಗೊಳಿಸಲು ಪ್ರಯತ್ನಿಸುತ್ತಿದ್ದ ಭೋಪಲೆಯವರಿಗೆ ಪ್ರಕೃತಿಯ ನಿಜ ಪ್ರತಿನಿಧಿಗಳಂತಿದ್ದ ಬಣ್ಣ ಬಣ್ಣದ ಹಕ್ಕಿಗಳು ಬಾನಂಗಳದಲ್ಲಿ ರೆಕ್ಕೆ ಬಿಚ್ಚಿ ಇಂಚರದೊಂದಿಗೆ ತೇಲಿ ಹೋಗುತ್ತಿದ್ದಾಗ ಅವರು ತುಂಬಾ ಭಾವುಕರಾಗಿ ನೋಡುತ್ತಿದ್ದರು. ಹಕ್ಕಿಯ ಚಲನವಲನದ ಬಗ್ಗೆ ಕುತೂಹಲಿಗಳಾಗಿದ್ದ ಅವರು, ಹಕ್ಕಿಗಳಿಂಚರ

ಇತರರಿಗೆ ಗಳುಪುವಂತೆನಿಸಿದರೆ ಭೋಪಲೆಯವರಿಗೆ ಅಲ್ಲೂ ಅರ್ಥ ಧ್ವನಿಸುತ್ತಿತ್ತು. ಕಲಾವಿದ ಪಿಕಾಸೊ ಹೇಳಿದಂತೆ 'ವೈ ಶುಡ್ ನಾಟ್ ವಿ ಟ್ರೈ ಟು ಅಂಡರ್‌ಸ್ಟ್ಯಾಂಡ್ ದಿ ಸಾಂಗ್ಸ್ ಆಫ್ ಬರ್ಡ್ಸ್?, ''ನಾವು ಹಕ್ಕಿಗಳ ಹಾಡನ್ನು ಅರ್ಥೈಸಿಕೊಳ್ಳಲು ಯತ್ನಿಸಬಾರದೇಕೆ?'' ಈ ಮನೋಭಾವವೇ ಅವರ ಪ್ರತಿ ಚಿತ್ರಗಳೂ ಜೀವಂತಿಕೆ ಮತ್ತು ಲವಲವಿಕೆಯಿಂದ ಕಂಗೊಳಿಸಲು ಕಾರಣವೇನೊ?

## ವ್ಯಕ್ತಿತ್ವ ಮತ್ತು ಹವ್ಯಾಸ

ಮಾರ್ತಂಡರಾವ್ ಭೋಪಲೆ ಬಾಲ್ಯದಿಂದಲೂ ಅನುಕೂಲಕರ ವಾತಾವರಣದಲ್ಲಿ ಬೆಳೆದು ದೊಡ್ಡವರಾದ ಪ್ರಯುಕ್ತ ಜೀವನದಲ್ಲಿ ಶಿಸ್ತನ್ನು ಊಟ ಉಡುಗೆಗಳಲ್ಲಿ ಅಚ್ಚುಕಟ್ಟುತನವನ್ನು ಅಳವಡಿಸಿಕೊಂಡು ಬಂದಿದ್ದರು. ಶುದ್ಧ ಶಾಖಾಹಾರಿಯಾಗಿದ್ದ ಭೋಪಲೆಯವರಿಗೆ ಬೆಣ್ಣೆ, ಮೊಸರು ಎಂದರೆ ತುಂಬಾ ಇಷ್ಟ. ಬ್ರೆಡ್ಡನ್ನು ಬೆಣ್ಣೆ ಸಕ್ಕರೆ ಜೊತೆ ಹೆಚ್ಚಾಗಿ ತಿನ್ನುತ್ತಿದ್ದರು. ಸದಾ ಚಹಾ ಪ್ರಿಯ. ನೀಳಕಾಯದ ಕೋಲು ಮುಖದ ಕೆಂಚು ವರ್ಣದ ಮಾರ್ತಂಡರಾವ್‌ರಿಗೆ ನೆಹರು ಶರ್ಟು ಧೋತರು ಇಷ್ಟವಾದ ಉಡುಗೆ. ಕೋಟು ಜಾಕೆಟ್‌ಗಳನ್ನು ಧರಿಸುತ್ತಿದ್ದುದ್ದೂ ಉಂಟು. ಯಾವಾಗಲೂ ಉತ್ತಮ ದರ್ಜೆಯ (ಎ-ಒನ್) ಬಟ್ಟೆಗಳನ್ನೇ ಉಪಯೋಗಿಸುತ್ತಿದ್ದರು. ಮುಂಬಯಿಯಿಂದ ಪ್ರತಿವರ್ಷ ಮೇ ತಿಂಗಳಲ್ಲಿ ಕಲಬುರ್ಗಿಗೆ ಬರುತ್ತಿದ್ದರು. ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆಸಿ ಕೊಂಡಿದ್ದ ಅವರಿಗೆ ದೇಶದ ಹಾಗೂ ವಿಶ್ವದ ಸಮಾಚಾರ ತಿಳಿಯುವ ಕುತೂಹಲ. ಕಲಬುರ್ಗಿಗೆ ಬಂದಾಗ ''ಟೈಮ್ಸ್ ಆಫ್ ಇಂಡಿಯಾ'' ಇಂಗ್ಲೀಷ್ ದೈನಿಕವನ್ನು ತರಲು ೫ ಕಿಲೋ ಮೀಟರ್‌ಗೂ ದೂರದ ರೈಲು ನಿಲ್ದಾಣಕ್ಕೆ ಸೈಕಲ್ ಮೇಲೆ ಅವರ ಕಿರಿಯ ತಮ್ಮ ವಿಠಲರಾವ್‌ರನ್ನು ಕಳಿಸಿ ಪತ್ರಿಕೆಯನ್ನು ತರಿಸಿ ಓದುತ್ತಿದ್ದರು. ತಂದೆಯವರಿಂದ ಬಳುವಳಿಯಾಗಿ ಬಂದ ಹಕೀಮ ವೃತ್ತಿಯಲ್ಲೂ ಒಲವಿತ್ತು. ಹಾಗೆ ಮಲ್ಲಕಂಭವೇರುವುದು, ತಲವಾರ ತಿರುಗಿಸುವುದು ಗರಡಿ ಮನೆಯಲ್ಲಿ ಸಾಧನೆಗೈಯುವುದು, ಕೈತೋಟ ಬೆಳೆಸುವುದು, ಉತ್ತಮ ಪುಸ್ತಕಗಳನ್ನು ಓದುವುದು ಇವು ಭೋಪಲೆಯವರ ಇತರ ಹವ್ಯಾಸಗಳು. ಜೆ.ಜೆ. ಕಲಾಶಾಲೆಯ

ನಿರ್ದೇಶಕರಾದ ಚಾರ್ಲಸ್ ಜಿರಾರ್ಡ್‌ರವರು ಒಂದೆಡೆ ಭೋಪಲೆಯವರ ವ್ಯಕ್ತಿತ್ವವನ್ನು ಕುರಿತು ಈ ರೀತಿ ಪರಿಚಯ ಮಾಡಿಕೊಟ್ಟಿದ್ದಾರೆ.

''...... ಸಂಕೋಚ ಮತ್ತು ಶಾಂತ ಸ್ವಭಾವದ ಇವರು ಮಾತಿಗಿಂತ ಕೃತಿಯಲ್ಲಿ ಹೆಚ್ಚು ಧಾರಾಳತನ ತೋರುತ್ತಾರೆ. ಇವರ ವರ್ಣಜ್ಞಾನ ಶ್ರೇಷ್ಠ ಮಟ್ಟದ್ದು. ತಮ್ಮ ಕೃತಿಗೆ ಲಾಭದಾಯಕವಾದ ರಚನೆಗಳಲ್ಲಿ ಇವರು ಆಸ್ಥೆ ವಹಿಸುವರು. ಭಾರತದಲ್ಲಿ ನಡೆದ ಅನೇಕ ಪ್ರದರ್ಶನಗಳಲ್ಲಿ ತಮ್ಮ ಕೃತಿಗಳ ಪ್ರದರ್ಶನ ನೀಡಿದ್ದಾರೆ....'' ಈ ಮಾತುಗಳು ಉಪಚಾರಕ್ಕಾಗಿ ಬರೆದವುಗಳಲ್ಲ. ನೂರಕ್ಕೆ ನೂರರಷ್ಟು ಸತ್ಯಾಂಶದಿಂದ ಕೂಡಿದವುಗಳಾಗಿವೆ.

ಶಾಂತ ಸ್ವಭಾವದ ಕ್ಷಮಾಗುಣದ, ಸದಾ ಕಾರ್ಯಮಗ್ನರಾಗುತ್ತಿದ್ದ ಭೋಪಲೆ ಏಕಾಂತ ಪ್ರಿಯರು. ಕಲಬುರ್ಗಿಗೆ ಬಂದಾಗ ಹೆಚ್ಚಾಗಿ ತಮ್ಮ ನೆಚ್ಚಿನ ಗುರು ಶಂಕರರಾವ್ ಆಳಂದಕರ ಮನೆಯಲ್ಲಿ ಕಳೆಯುತ್ತಿದ್ದರು. ಅಲ್ಲಿ ನವ್ಯ ಕಲೆಯಲ್ಲಿನ ಆವಿಷ್ಕಾರ, ಅದರ ಇತಿಮಿತಿಗಳು ಭಾರತೀಯ ಕಲೆಯ ಧ್ಯೇಯ ಧೋರಣೆಗಳು ಆ ಕಲಾ ಸಂಪ್ರದಾಯವನ್ನು ಮುಂದಿನ ತಲೆಮಾರಿಗೆ ಸಾಗಿಸುವ ಪರಿ ಮತ್ತು ಜವಾಬ್ದಾರಿ ಕಾಳಜಿಗಳ ಕುರಿತು ದಿನವಿಡೀ ಗುರುಶಿಷ್ಯರ ಮಧ್ಯೆ ಚಿತ್ರಕಲೆಯ ಕುರಿತಾದ ಚರ್ಚೆಯೇ ಸಾಗುತ್ತಿತ್ತು. ಈ ಚಿಂತನ ಮಂಥನದಿಂದ ಗುರುಗಳ ಚಿತ್ರಕಲಾ ಕಾಳಜಿಯನ್ನು ತಮ್ಮ ಜವಾಬ್ದಾರಿಯನ್ನು ಅರಿತುಕೊಂಡರು. ಹೀಗಾಗಿ ಅವರು ಎಳೆದ ರೇಖೆಗಳಲ್ಲಿ ಬಳಸಿದ ಬಣ್ಣಗಳಲ್ಲಿ ಆಯ್ದುಕೊಂಡ ವಸ್ತು ವಿಷಯದಲ್ಲಿ ಭಾರತೀಯ ಸಂಪ್ರದಾಯಕ್ಕೆ ಅಗ್ರಸ್ಥಾನವಿರುತ್ತಿತ್ತು. ಆದರೂ ಎಲ್ಲವನ್ನೂ ದೇಶೀಯ ಎಂದು ಮುಗ್ಧರಾಗಿ ಅನುಕರಿಸಲಿಲ್ಲ. ಅದರಲ್ಲಿ ತ್ಯಾಜ್ಯವೆಂದೆನಿಸಿದುದನ್ನು ನಿರ್ದಾಕ್ಷಿಣ್ಯವಾಗಿ ಕೈಬಿಟ್ಟು ಕೃತಿರಚನೆ ಮಾಡಿದರು. ಕಲಾವಿದ ಸೃಜನಶೀಲನಾಗಿರಬೇಕೇ ವಿನಃ ನಕಲು ಹೊಡೆಯುವವನಾಗಬಾರದು ಎಂದು ಭೋಪಲೆಯವರು ಪದೇ ಪದೇ ಹೇಳುತ್ತಿದ್ದರು.

ಡಿಪ್ಲೋಮಾ ಪದವಿ ಪೂರೈಸಿದ ಮೇಲೆ ಮಾರ್ತಂಡರಾವ್ ಸುಭದ್ರಾಬಾಯಿಯವರ ಕೈಹಿಡಿದರು. ನೂತನ ದಾಂಪತ್ಯದ ಆರಂಭ

ಕಲಬುರ್ಗಿಯಲ್ಲಿ ಆಯಿತು. ಸುಖಃ ಸಂತೋಷದಿಂದ ಸಂಸಾರಿಕ ಬದುಕನ್ನು ಸಾಗಿಸುತ್ತಿದ್ದ ಈ ದಂಪತಿಗಳಿಗೆ ಗಂಡುಮಗುವೊಂದಾಗಿ ಇವರ ಬಾಳು ಹರ್ಷದ ಕಡಲಾಯಿತು. ಮಗನಿಗೆ ನಾರಾಯಣನೆಂದು ಹೆಸರಿಟ್ಟರು. ಮುಂದೆ ಇವರ ತಮ್ಮ ನರಸಾಬಾಯಿಯವರ ಪುತ್ರ ನಾಗೇಶ್ವರರಾವ್ ಹೊಲಿಗೆ ಕೆಲಸಕ್ಕಾಗಿ ಮುಂಬಯಿಗೆ ಬಂದು ಅಣ್ಣ ಭೋಪಲೆಯವರೊಡನೆ ಇರಹತ್ತಿದರು. ಕೆಲಕಾಲ ಅವರ ಹತ್ತಿರ ಕಿರಿಯ ಸಹೋದರ ವಿಠಲರಾವ್‌ರೂ ಇದ್ದರು.

ಭೋಪಲೆಯವರಲ್ಲಿಗೆ ಖ್ಯಾತ ಕಲಾವಿದರಾದ ಎಸ್.ಎಮ್. ಪಂಡಿತರು ಆಗಾಗ ಬರುತ್ತಿದ್ದರು. ಹಾಗೆಯೇ ಕಲಬುರ್ಗಿಯವರೇ ಆದ ಇನ್ನೋರ್ವ ಯುವ ಕಲಾವಿದ ಕುಮಾರ ಚಂದ್ರಶೇಖರರು ಭೋಪಲೆಯವರ ಆತ್ಮೀಯರಲ್ಲೊಬ್ಬರು. ಚಿಕ್ಕ ವಯಸ್ಸಿನಲ್ಲೇ ಕುಮಾರ ಚಂದ್ರಶೇಖರರು ಚಿತ್ರ ಕಲೆಯಲ್ಲಿ ಸಾಧಿಸಿದ್ದ ಪ್ರಗತಿಯನ್ನು ಅವರ ಸ್ವಭಾವವನ್ನು, ಪ್ರತಿಭೆಯನ್ನು ಮೆಚ್ಚಿದ್ದ ಭೋಪಲೆ ಅವರು ಮುಂದೆ ಈ ಹುಡುಗ ಕಲಬುರ್ಗಿಯ ಗುಡಿ ಶಿಖರಕ್ಕೆ ಕಲಾಕೀರ್ತಿಯ ಕಳಸವಿಡುವಂಥವ-ನಾಗುತ್ತಾ ನೆಂದು ಭರವಸೆ ತಾಳಿದ್ದರು. ಅವರೆಣಿಕೆಯಂತೆ ಕುಮಾರ ಚಂದ್ರಶೇಖರ ಚಿತ್ರಕಲಾ ಕ್ಷೇತ್ರದಲ್ಲಿ, ಚಲನಚಿತ್ರ ಕ್ಷೇತ್ರದಲ್ಲಿ ದಾಪುಗಾಲಿಕ್ಕುತ್ತಾ ಸಾಗಿದ ಸಂದರ್ಭದಲ್ಲೇ ಅಂಧತ್ವ ಅವರ ಪ್ರಗತಿಗೆ ಮಾರಕವಾಗಿ ಕಲಬುರ್ಗಿಯ ಅರಳುವ ಪ್ರತಿಭೆ ಮುರುಟಿಹೋಯಿತು. ಇದರಿಂದ ಭೋಪಲೆ ಯವರಿಗಾದ ನೋವು ಅಷ್ಟಿಷ್ಟಲ್ಲ.

ಹಿರಿಯರಿರಲಿ, ಕಿರಿಯರಿರಲಿ, ಅವರ ಪ್ರತಿಭೆಯನ್ನು ಮೆಚ್ಚುವ, ಅವರ ಕಲೆಯನ್ನು ಗೌರವಿಸುವ ಪ್ರೋತ್ಸಾಹಿಸುವ ಹಿರಿಯ ಗುಣ ಅವರಲ್ಲಿತ್ತು. ತಮ್ಮ ಗುರು ಶ್ರೀ ಶಂಕರ್‌ರಾವ್ ಆಳಂದಕರರನ್ನು ಗೌರವಿಸುವಂತೆ ಅದೇ ನೂತನ ವಿದ್ಯಾಲಯ ಶಿಕ್ಷಣ ಸಂಸ್ಥೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದ ಶ್ರೀ ಶಂಕ್ರಪ್ಪ ಮಾಸ್ತರ ಪಾಟೀಲ್ ಅವರಲ್ಲೂ ತುಂಬಾ ಆದರಾಭಿಮಾನವನ್ನು ಹೊಂದಿದವರಾಗಿದ್ದರು.

ತಮ್ಮ ಕಲೆಯ ಬಗ್ಗೆ ಅಚಲ ವಿಶ್ವಾಸವನ್ನೂ, ಸಮಾಧಾನವನ್ನೂ ಹೊಂದಿದ್ದ ಭೋಪಲೆಯವರು ಅಪ್ರತಿಮ ಕಲಾವಿದರೆನಿಸಿಕೊಂಡಿದ್ದರೂ,

ಎಂದೂ ಅಹಂಕಾರದಿಂದ ಬೀಗಿದವರಲ್ಲ. ವಿನಯಶೀಲ, ಸ್ನೇಹಪರ, ಸೌಜನ್ಯದಿಂದ ಕೂಡಿದ ತುಂಬಾ ಸಂಕೋಚ ಸ್ವಭಾವದ ಅವರು ಎಂದೂ ಪದಕ ಪಾರಿತೋಷಕಕ್ಕಾಗಲೀ, ಪ್ರಶಸ್ತಿ, ಪದವಿಗಾಗಲೀ ಹಂಬಲಿಸಿದವರಲ್ಲ. ಅದಕ್ಕಾಗಿ ಯಾವುದೇ ಲಾಬಿ ಮತ್ತು ರಾಜಕೀಯವನ್ನೂ ಮಾಡಿದವರಲ್ಲ. ಅದನ್ನು ಹುಡುಕಿಕೊಂಡು ಹೋದವರಲ್ಲ. ಪ್ರಶಸ್ತಿ ಪುರಸ್ಕಾರಕ್ಕಿಂತ ಪಂಡಿತರಂತೆ ಪಾಮರರೂ ತಮ್ಮ ಕೃತಿಗಳ ವೀಕ್ಷಣೆಯಿಂದ ತೃಪ್ತರಾಗಿ ತಮ್ಮ ದೈನಂದಿನ ಬೇಗುದಿಯನ್ನು ದುಗುಡ ದುಮ್ಮಾನಗಳನ್ನು ಮರೆತು ಕ್ಷಣಕಾಲವಾದರೂ ಶಾಂತಿ ಸಮಾಧಾನ ಸಂತಸವನ್ನು ಅನುಭವಿಸಿದಲ್ಲಿ ಅದುವೇ ತಮಗೆ ಸಿಕ್ಕುವ ಅತ್ಯುನ್ನತ ಪ್ರಶಸ್ತಿ ಪುರಸ್ಕಾರವೆಂದು ಬಗೆದಿದ್ದರು. ಇಂಥ ಉದಾರ ಭಾವನೆಯ ಕಲಾವಿದನಿಗೆ ಕ್ರೂರ ವಿಧಿಯ ಜೊತೆ ಕೆಲವರು ಕೈಕಲೆಸಿ ಕಾಡಿದರೇನೋ ಎಂಬ ಅನುಮಾನ, ಅವರ ಬದುಕಿನ ಕೆಲ ಘಟನೆಗಳನ್ನು ಅವಲೋಕಿಸಿದಾಗ ಅನ್ನಿಸದೇ ಇರದು. ನಮ್ಮ ಭವ್ಯ ಪರಂಪರೆ ಮತ್ತು ಉನ್ನತ ಸಂಸ್ಕೃತಿ ಬಗ್ಗೆ ಅಭಿಮಾನ ಪಡುವ ನಮಗೆ, ಸಂಸ್ಕೃತಿಯ ವಾರಸುದಾರರಾಗಿರುವ ಕಲಾವಿದರ ಬಗ್ಗೆ ಅದೇಕೆ ಅಸಡ್ಡೆಯೋ? ಇದ್ದಾಗ ಅವರಿಗೆ ತಕ್ಕ ಅನುಕೂಲಗಳನ್ನು ಕಲ್ಪಿಸಿಕೊಟ್ಟು ಪ್ರೀತ್ಯಾದರಗಳನ್ನು ತೋರಿಸಿ ಪೋಷಿಸಿಕೊಂಡು ಬಂದಲ್ಲಿ ನಾಡವರೂ ಬಾನವರೂ ಮೆಚ್ಚುವಂಥ ಕೃತಿ ರಚನೆ ಮಾಡಿ ಅವರು ದೇಶದ ಉನ್ನತ ಸಂಸ್ಕೃತಿಗೆ ಇನ್ನೂ ಹೆಚ್ಚಿನ ಹಿರಿಮೆ ಗರಿಮೆ ತರುವುದರಲ್ಲಿ ಸಂದೇಹವಿಲ್ಲ.

## ಭೋಪಲೆಯವರ ಚಿತ್ರಗಳು

ಪೆನ್ಸಿಲ್ ಸ್ಕೆಚ್ ಮತ್ತು ಡ್ರಾಯಿಂಗ್‌ನಲ್ಲಿ ಭೋಪಲೆಯವರದು ಎತ್ತಿದ ಕೈ. ''ನನ್ನೊಡನೆ ಯಾರಾದರೂ ಐದೇ ನಿಮಿಷವಾದರೂ ಕುಸ್ತಿ ಮಾಡಬಲ್ಲಿರಾ?'' ಜಗತ್ತಿನ ಬಹುಭಾಗದಲ್ಲಿ ಆಧಿಪತ್ಯವನ್ನು ಸ್ಥಾಪಿಸಿದ್ದ ಬ್ರಿಟಿಷ್ ಸಾಮ್ರಾಜ್ಯಶಾಹಿಯ ನೆಲ ಲಂಡನ್ನಿನಲ್ಲಿ ಅವರ ಅಧೀನ ರಾಷ್ಟ್ರವಾದ ಭಾರತದ ಪೈಲ್ವಾನ್‌ನೊಬ್ಬ ಎಸೆದ ಸವಾಲಿಗೆ ಆಗಮಿಸಿದ ಮಲ್ಲರೂ, ನೆರೆದ ಜನಸ್ತೋಮ ಸ್ತಂಭೀಭೂತರಾದರು. ಸಾಮ್ರಾಜ್ಯಶಾಹಿಗಳು ಮುಜುಗರದಿಂದ ತಳಮಳಿಸುವಂತಾಯಿತು. ಸವಾಲಿನಂತೆ ಸಲೀಸಾಗಿ ಎಲ್ಲ ಜಟ್ಟಿಗಳನ್ನು ಮಣಿಸಿದ ಜಗಜಟ್ಟಿ, ಭಾರತದ 'ಗ್ಹಾಮ'. ಈ

ಗಾಮ ಪೈಲ್ವಾನನ ಕಪ್ಪು ಹುಡಿಯ (ಪೌಡರ್ ವರ್ಕ್) ಪೆನ್ಸಿಲ್ ಚಿತ್ರಣ ಕಲಬುರ್ಗಿಯಲ್ಲಿರುವ ಭೋಪಲೆಯವರ ಮನೆಯಲ್ಲಿದೆ. ಭೋಪಲೆಯವರು ೧೯೩೪ರಲ್ಲಿ ಈ ಚಿತ್ರ ರಚಿಸಿದ್ದಾರೆ. ೫೦x೩೮ ಸೆಂ. ಮೀ. ಅಳತೆಯ ಜಟ್ಟಿಯ ಚಿತ್ರದಲ್ಲಿ ಅಂಗಸಾಧನೆಯಿಂದ ಹುರಿಗೊಂಡ ಮೈಕಟ್ಟು, ಎಂಥವರನ್ನು ಲೀಲಾಜಾಲವಾಗಿ ಸೋಲಿಸಬಲ್ಲೆನೆಂಬ ಆತ್ಮವಿಶ್ವಾಸದ ಕೆಚ್ಚನ್ನು ಸೂಸುವ ತೀಕ್ಷ್ಣ ಕಣ್ಣುಗಳು, ಗಂಭೀರ ಮುಖದಲ್ಲಿ ನೀಳ ನಾಸಿಕ ಕೆಳಗೆ ಸವಾಲನ್ನು ಸ್ವೀಕರಿಸುವಂತಹ ದಪ್ಪ ಮೀಸೆ ವ್ಯಕ್ತಿಯ ಬಾಹ್ಯಾಂತರಗಳೆರಡನ್ನೂ ಭೋಪಲೆಯವರು 'ಗಾಮನ ಚಿತ್ರದಲ್ಲಿ ಸಮರ್ಥವಾಗಿ ಬಿಂಬಿಸಿದ್ದಾರೆ. ಈ ಚಿತ್ರದ ಪಕ್ಕದಲ್ಲೇ ೧೯೩೬ರಲ್ಲಿ ರಚಿಸಿದ ಪೆನ್ಸಿಲ್‌ನಲ್ಲಿ ಬರಿಮೈಯ ಮಗುವಿನ ೫೦x೩೮ ಸೆಂ.ಮೀ. ಅಳತೆಯ ಚಿತ್ರವಿದೆ. ಮಗುವಿನ ಕೋಮಲತೆ, ತುಟಿಯಂಚಿನಲ್ಲಿ ಮಿನುಗುವ ತುಂಟ ಲಾಸ್ಯ, ಕುತೂಹಲ ಭರಿತ ಕಣ್ನೋಟ ಎಲ್ಲವೂ ಆಕರ್ಷಕ. ಆಗ ಭೋಪಲೆಯವರಿಗೆ ರೂಪದರ್ಶಿಯಾಗಿದ್ದ ಮಗು ಈಗ ೬೮ರ ವೃದ್ಧ ಕಲಬುರ್ಗಿಯ ಬಸವರಾಜ, ಬಿಜಾಪೂರ ಅವರು.

೧೯೩೬ರಲ್ಲೆ ಈ ३೧ x ೨೫ ಸೆಂ.ಮೀ. ಅಳತೆಯಲ್ಲಿ ತಮ್ಮ ತಂದೆ ತಿಪ್ಪಣ್ಣನವರ ಚಿತ್ರವನ್ನು ಪೆನ್ಸಿಲ್‌ನಿಂದ ರಚಿಸಿದ್ದಾರೆ. ಹಕೀಮ ವೃತ್ತಿಗೆ ತಕ್ಕಂತೆ ಕುತೂಹಲದಿಂದ ತಪಾಸಿಸುವ ಭಾವ ಈ ಚಿತ್ರದ ಕಂಗಳಲ್ಲಿ ವ್ಯಕ್ತಗೊಂಡಿದೆ.

## ಬಾಪು (ಸ್ಟುಡಿಯೋ ಇಂಡಸ್ಟ್ರೀಜ್)

೦೨-೦೪-೧೯೪೯ರಲ್ಲಿ ರಚಿಸಿದ ಚಿತ್ರ 'ಬಾಪು'. ಸಾವಿನ ಮೇಲೆ ಜಯ ಪಡೆದ ಬಾಪುವಿನ ಚಿತ್ರ ಇದು. ೩೫x೨೫ ಸೆಂ.ಮೀ. ಅಳತೆಯ ಕಪ್ಪು ಮಸಿಯಿಂದ ರಚಿಸಲ್ಪಟ್ಟಿದೆ. ಈ ಚಿತ್ರದಲ್ಲಿ ಕನ್ನಡಕದ ಹಿಂದಿರುವ ಕಣ್ಣುಗಳು ಕಾರುಣ್ಯ ಹಾಗೂ ಮಾನವಾನುಕಂಪವನ್ನು ಸೂಚಿಸುತ್ತವೆ. ಗಾಢ ಚಿಂತನೆಯಲ್ಲಿ ತೊಡಗಿರುವ ಬಾಪುವಿನ ಗಂಭೀರ ವದನ, ಬಾಪುವಿನ ಜೀವನಾದರ್ಶಗಳು, ಚಿಂತನೆಗಳನ್ನು ಈ ಚಿತ್ರದಲ್ಲಿ ಒಡಮೂಡಿಸಲು ಭೋಪಲೆಯವರು ಯಶಸ್ವಿಯಾಗಿದ್ದಾರೆ.

## ಪ್ಯಾಲೇಸ್

'ಬೀತೆ ದಿನ್ ಹಿಂದಿ ಚಲನಚಿತ್ರಕ್ಕಾಗಿ ರೂಪಿಸಿದ ಸೆಟ್‌ನ ಚಿತ್ರವಿದು.

ಭೋಪಲೆಯವರು ಹಾಫ್ ಇಂಪೀರಿಯಲ್ ಅಳತೆಯ ಡ್ರಾಯಿಂಗ್ ಕಾಗದದ ಮೇಲೆ ಕೆಲ ಪೆನ್ಸಿಲ್ ಸ್ಕೆಚ್‌ಗಳನ್ನು ಮತ್ತು ಇಂಡಿಯನ್ ಇಂಕಿನಲ್ಲಿ ಕೆಲ ಡ್ರಾಯಿಂಗ್‌ಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೩೦-೧೨-೧೯೫೦ರಲ್ಲಿ ರಚಿಸಿದ ಪ್ಯಾಲೇಸ್ (ಅರಮನೆ) ಎಂಬುದು ೫೬x೩೨ ಸೆಂ.ಮೀ. ಅಳತೆಯ ಕರಿ ಮಸಿಯಲ್ಲಿ ಬಿಡಿಸಿದ ಡ್ರಾಯಿಂಗ್. ಇದರಲ್ಲಿ ಅರಮನೆಯ ಪ್ರಾಚೀನತೆ, ಭವ್ಯತೆ ಹಾಗೂ ವೈಭವಗಳು ತಂತಾನೆ ಮೈವೆತ್ತಿ ಬಂದಿವೆ. ಅಲಂಕಾರಕ್ಕಾಗಿ ಇರಿಸಿದ ವಿಗ್ರಹಗಳು ಪ್ರವೇಶ ದ್ವಾರದ ಅಕ್ಕಪಕ್ಕ ಘನಗಾಂಭೀರ್ಯದಿಂದ ಪವಡಿಸಿ ಕಾವಲು ಕಾಯುತ್ತಿರುವ ಸಿಂಹಗಳು, ಕಿಟಕಿ, ಕಂಬ, ಬೋದುಗೆಗಳ ಅಲಂಕರಣ ಈ ಎಲ್ಲವೂ ಭೋಪಲೆಯವರ ನಿರೀಕ್ಷಣಾ ಶಕ್ತಿಯ ಮತ್ತು ಚಿತ್ರಿಸುವ ತಾಳ್ಮೆಯ ದ್ಯೋತಕವಾಗಿ ಈ ಅರಮನೆಯ ಚಿತ್ರ ಮೂಡಿಬಂದಿದೆ.

## ಪ್ಯಾಲೇಸ್ ಎಕ್ಸ್‌ಟೀರಿಯರ್

೨೮-೦೭-೧೯೫೭ರಂದು ರಚಿಸಿದ ಅರಮನೆಯ ಹೊರನೋಟದ ಚಿತ್ರವಿದು. ವಿಶಾಲವಾದ ಪ್ರವೇಶ ದ್ವಾರದ ಮೇಲೆ ಅರ್ಧವೃತ್ತಾಕಾರದ ಕಮಾನು. ಅಕ್ಕಪಕ್ಕಕ್ಕೆ ದೀಪವಿಡುವ ಅಲಂಕೃತ ಗೂಡುಗಳು, ಅದರ ಎಡಬಲಕ್ಕಿರುವ ಗೋಡೆಗಳಲ್ಲಿ ವಿಶಾಲವಾದ ವಾತಾಯನಗಳು, ಅದಕ್ಕೆ ಹೊಂದಿಕೊಂಡೇ ಗೋಡೆಯಲ್ಲಿ ಅಳವಡಿಸಿದ ಕಿರುಕಾವಲು ಗೋಪುರಗಳು, ಪ್ರವೇಶದ್ವಾರದ ಅಕ್ಕಪಕ್ಕ ವಿಶಾಲ ಜಗಲಿ ಕಟ್ಟೆಗಳು, ಅರಮನೆಯ ಘನಗಾಂಭೀರ್ಯಕ್ಕೆ ಕನ್ನಡಿ ಹಿಡಿದಂತಿದೆ.

## ಅಲೆಮಾರಿ ಹುಡುಗಿ (ಎ ಜಿಪ್ಸಿ ಗರ್ಲ್)

೮-೧೦-೧೯೫೭ರಂದು ಬಿಡಿಸಿದ ಪೆನ್ಸಿಲ್ ರೇಖಾಚಿತ್ರವಿದು. ಎಡಗೈಯನ್ನು ಸೊಂಟದ ಮೇಲಿರಿಸಿಕೊಂಡಿರುವ ಈ ಹುಡುಗಿಯ ಎಡಬಲ ಭುಜಗಳ ಮೇಲಿಂದ ಹಾದು ಎದೆಯ ಮೇಲೆ ಇಳಿಬಿದ್ದ ನೀಳ ಹೆರಳುಗಳು, ತುಂಟತನದ ನಗು. ಈ-ಅಲೆಮಾರಿ ಹುಡುಗಿಯ ಚಿತ್ರದಲ್ಲಿ ಸಶಕ್ತವಾಗಿ ಮೂಡಿಬಂದಿದೆ. ಹಾಗೂ ಈ ಚಿತ್ರದಲ್ಲಿ ಆಕೆ ನಿಂತ ನಿಲುವಿನಲ್ಲಿ ಮುಖಭಾವದಲ್ಲಿ ಅಲೆಮಾರಿ ಹೆಣ್ಣಿನ ತಂಟೆಕೋರತನ ಥಟ್ಟನೆ

ಎದ್ದುಕಾಣುತ್ತದೆ. ೯-೧೦-೧೯೫೭ರಂದು ರಜಪೂತ ಗರ್ಲ್ ಎಂಬ ಪೆನ್ಸಿಲ್ ರೇಖಾಚಿತ್ರವನ್ನು ಆಕರ್ಷಕವಾಗಿ ಬಿಡಿಸಿದ್ದಾರೆ.

### ಡ್ರಾಯಿಂಗ್ ರೂಮ್

೨೮-೧೨-೧೯೫೭ರಂದು ಭೋಪಲೆಯವರು ಕರಿಮಸಿಯಲ್ಲಿ ಬರೆದ ಹಾಫ್ ಇಂಪೀರಿಯಲ್ ಸೈಜಿನ ರೇಖಾಚಿತ್ರವಿದು. ಚಿತ್ರಕಲಾ ಕೋಣೆ, ಅಲ್ಲಿನ ಶೋಕೇಸ್, ರೌಂಡ್ ಟೇಬಲ್, ಗಾಜಿನ ತೂಗುದೀಪ, ಇಳಿಬಿಟ್ಟ ಪರದೆಗಳು, ಸೂಕ್ಷ್ಮಾಲಂಕಾರಗಳಿಂದ ಕೂಡಿದ ಮೆತ್ತೆಯ ಕುರ್ಚಿಗಳು, ಕುಸುರಿ ಕೆಲಸದ ಕಟ್ಟಿಗೆಯ ಚೌಕಟ್ಟು ಎಲ್ಲವನ್ನು ವಿವರವಾಗಿ ಸೆರೆಹಿಡಿದ ಈ ಚಿತ್ರ ಭೋಪಲೆಯವರ ಸೂಕ್ಷ್ಮಗ್ರಾಹಿತ್ವಕ್ಕೆ ಹಿಡಿದ ಕನ್ನಡಿ.

### ಡಿಝೂಯಿನ್ ಆಫ್ ಮುಸಾಫಿರ್‌ಖಾನಾ (ಧರ್ಮಛತ್ರದ ನಕ್ಷೆ)

೪೧ x೨೮ ಸೆಂ.ಮೀ. ಅಳತೆಯ ಇದೊಂದು ಧರ್ಮಛತ್ರದ ಸೀಸಕಡ್ಡಿಯ ಕಪ್ಪುಬಿಳುಪಿನ ಚಿತ್ರ. ಪಾರ್ಶ್ವಭಾಗವನ್ನು ಮೇಲಿನಿಂದ ವೀಕ್ಷಿಸಿದಂತೆ ಇದನ್ನು ಚಿತ್ರಿಸಿದ್ದಾರೆ.

### ನೆಹರು

ಭೋಪಲೆಯವರು ವ್ಯಂಗ್ಯಚಿತ್ರಗಳನ್ನು ರಚಿಸಿರುವ ಸಾಧ್ಯತೆ ಉಂಟೆಂಬುದಕ್ಕೆ ಸಧ್ಯ ಲಭ್ಯವಿರುವ ಒಂದೇ ಒಂದು ನೆಹರುಜಿಯವರ ವ್ಯಂಗ್ಯಚಿತ್ರದಿಂದ ಅರಿಯಬಹುದಾಗಿದೆ. ೨೯x೯.೫ ಸೆಂ.ಮೀ. ಅಳತೆಯಲ್ಲಿ ಕಪ್ಪುಮಸಿಯಿಂದ ಚಿತ್ರಿಸಿದ್ದಾರೆ. ಪ್ರಕಾಂಡ ಪಾಂಡಿತ್ಯದ ಕುರುಹಾಗಿ ಜವಹಾರರ ದೊಡ್ಡ ತಲೆಗೆ ದೊಗಳೆ ಗಾಂಧಿ ಟೊಪ್ಪಿಗೆ ಹಾಕಿದ್ದಾರೆ. ಕೆಳಗೆ ಸಣಕಲು ದೇಹಕ್ಕೆ ಅಂಟಿಕೊಂಡಂತಿರುವ ನೆಹರು ಶರ್ಟು ಜಾಕೀಟು ಮತ್ತು ಪೈಜಾಮಧಾರಿ ನೆಹರುರವರ ವಾಕ್ಚಾತುರ್ಯಕ್ಕೆ ವಿಶ್ವವೇ ಬೆರಗುಗೊಂಡು ಮರುಳಾದುದರ ಸಂಕೇತವಾಗಿ ಭಾಷಣಕಾರ ನೆಹರುರವರ ಮುಂದೆ ಅವರತ್ತ ಬಾಗಿರುವ ಕೊಳವೆಯ ತುದಿಗೆ ಮೈಕಿನ ಸ್ಥಾನದಲ್ಲಿ ಪೃಥ್ವಿ (ಗ್ಲೋಬ್)ಯನ್ನು ಚಿತ್ರಿಸಿದ್ದಾರೆ. ವ್ಯಕ್ತಿಯ ಬಾಹ್ಯಾಂತರಗಳನ್ನು ಭಾವಚಿತ್ರಗಳಲ್ಲಿ ಮೂಡಿಸುವುದರಲ್ಲಿ ಭೋಪಲೆಯವರು ಸಿದ್ಧಹಸ್ತರು. ಗಾರ್ಡನ್ ಆಫ್ ರೋಜ್ ಎಂಬ

ನೆಹರೂಜಿಯ ಪೋರ್ಟ್ರೇಟ್ ಇದಕ್ಕೊಂದು ಉತ್ತಮ ಉದಾಹರಣೆ. ಭೋಪಲೆ, ಪಿ. ಟಿ. ರೆಡ್ಡಿ, ಎ.ಎ. ಮಜೀದ್, ಎಮ್.ವಾಯ್ ಕುಲಕರ್ಣಿ ಮತ್ತು ಸಿ. ಬಾಪ್ತಿಸ್ತಾ ದಿ ಬಾಂಬೆ ಗ್ರೂಪ್ ಆಫ್ ಕಂಟೆಂಪರರಿ ಇಂಡಿಯನ್ ಆರ್ಟಿಸ್ಟ್ಸ್ ಎಂಬ ಹೆಸರಿನಲ್ಲಿ ಈ ಗುಂಪು ೧೯೪೧ರಲ್ಲಿ ಕಲಾಪ್ರದರ್ಶನವೇರ್ಪಡಿಸಿದಾಗ ಪ್ರದರ್ಶಿಸಲ್ಪಟ್ಟ ಚಿತ್ರಗಳಲ್ಲಿ ಭೋಪಲೆಯವರ 'ಬಿಗಿನಿಂಗ್ ಆಫ್ ಪ್ಲೇ' ಮತ್ತು 'ನ್ಯಾರೋ ಸ್ಟ್ರೀಟ್' ಎಂಬ ಚಿತ್ರಗಳು ತುಂಬಾ ಪ್ರಮುಖವಾದವುಗಳು.

## ಬಿಗಿನಿಂಗ್ ಆಫ್ ಪ್ಲೇ (ಆಟದ ಆರಂಭ)

ಅಜಂತಾ ಶೈಲಿಯನ್ನು ಥಟ್ಟನೆ ನೆನಪಿಗೆ ತರುವ ಅಪ್ಪಟ ಭಾರತೀಯ ಕಲಾಶೈಲಿಯ ಸುಂದರ ಸಂಯೋಜನಾ ವರ್ಣಚಿತ್ರವಿದು. ಆಟಕ್ಕೆ ಅಣಿಯಾಗುತ್ತಿರುವ ಬಾಲಕರು ಇಪ್ಪತ್ತನೇ ಶತಮಾನದ ಆರಂಭದ ಅವಧಿಯವರೆಂಬುದು ಅವರು ತೊಟ್ಟಿರುವ ಶುದ್ಧ ಭಾರತೀಯ ಉಡುಪುಗಳಿಂದ ಮತ್ತು ಅವರ ಕೇಶ ಶೈಲಿಯ ವ್ಯಕ್ತಿ ಚಿತ್ರದಿಂದರಿಯಬಹುದು. ಚಿತ್ರಕ್ಕೆ ಬಳಸಿರುವ ದಟ್ಟ ವರ್ಣಗಳು ಮತ್ತು ಅತಿ ಉತ್ಸಾಹದಿಂದ ಆಟಕ್ಕೆ ಅಣಿಯಾಗುತ್ತಿರುವ ಬಾಲಕರ ಮುಖದಲ್ಲಿ ವ್ಯಕ್ತಗೊಂಡ ಕುತೂಹಲ ಮತ್ತು ಲವಲವಿಕೆ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಮಕ್ಕಳ ಆಟದಲ್ಲಿ ಅವರ ನೆಚ್ಚಿನ ನಾಯಿಯೂ ಪಾಲ್ಗೊಂಡಿರುವುದು ಚಿತ್ರದ ಸಹಜತೆಗೆ ಕಳೆಕಟ್ಟಿದೆ.

## ಎ ನ್ಯಾರೋ ಸ್ಟ್ರೀಟ್ (ಇಕ್ಕಟ್ಟಾದ ಓಣಿ)

ಇದು ತೈಲ ವರ್ಣದ ಚಿತ್ರ. ಇಸ್ಲಾಮಿಕ್ ಶೈಲಿಯ ಭವನ ಮತ್ತು ಅದರ ಅಕ್ಕಪಕ್ಕ ಮತ್ತು ಎದುರಿಗಿರುವ ಕಟ್ಟಡಗಳು ಅವುಗಳ ಮೇಲೆ ಬಿದ್ದ ನಸುಬೆಳಕು, ಅಲ್ಲಲ್ಲಿ ಕವುಚಿಕೊಂಡಿರುವ ನೆರಳು, ಇಕ್ಕೆಲಗಳ ಕಟ್ಟಡಗಳ ಮಧ್ಯ ಸಿಕ್ಕಿಹಾಕಿಕೊಂಡಿರುವ ಡೊಂಕು ರಸ್ತೆ, ಓಣಿಯ ಇಕ್ಕಟ್ಟನ್ನು ಯಥಾವತ್ತಾಗಿ ಬಿಂಬಿಸುತ್ತದೆ. ಹಿನ್ನೆಲೆಯಲ್ಲಿ ಮಂದ ಪ್ರಕಾಶದ ಹಿಮಾಚ್ಛಾದಿತ ದಿಣ್ಣೆ. ಅದರಲ್ಲಿ ಅಲ್ಲಲ್ಲಿ ಕಾವಲುಗಾರರೋಪಾದಿಯಲ್ಲಿ ನಿಂತ ಬೋಳು ಮರಗಳು. ಕೊರೆಯುವ ಚಳಿಗಾಲವನ್ನು ಸೂಚಿಸುವ ಈ ಚಿತ್ರಕ್ಕೆ ಬಳಸಿರುವ ಬಣ್ಣಗಳು, ಭೋಪಲೆಯವರ ಶ್ರೇಷ್ಠಮಟ್ಟದ

ವರ್ಣಜ್ಞಾನಕ್ಕೆ ಸಾಕ್ಷಿಯಾಗಿದೆ.

## ಧ್ಯಾನಯೋಗಿ

ಭೋಪಲೆಯವರ ಬಹುಪಾಲು ಚಿತ್ರಗಳಿಂದ ಅವರೊಬ್ಬ ಸಂಪ್ರದಾಯವಾದಿ ಕಲಾವಿದರೆಂದೆನಿಸಿದರೂ ಪಾಶ್ಚಾತ್ಯ ಕಲಾಶೈಲಿಯ ತಂತ್ರಗಳು ಅವರ ಕೆಲ ವರ್ಣ ಚಿತ್ರಗಳಲ್ಲಿ ಹೊಮ್ಮಿರುವುದುಂಟು. ಆ ಪೈಕಿ 'ಧ್ಯಾನಯೋಗಿ' ಎಂಬ ತೈಲವರ್ಣದ ಚಿತ್ರ, ಪ್ರೊ. ವಿ. ಜಿ. ಅಂದಾನಿಯವರ ಕಲಾಶಾಲೆಯ ಸಂಗ್ರಹದಲ್ಲಿದೆ. ಭೋಪಲೆಯವರ ಕೃತಿಗಳಲ್ಲಿ ಇದೊಂದು ಅತ್ಯಂತ ಅಮೂಲ್ಯಕೃತಿಯೆಂದು ಹೇಳುತ್ತಾರೆ. ಇಲ್ಲಿ ಧ್ಯಾನಯೋಗಿಯ ಸಹಜತೆಯ ಜೊತೆ, ಕಲಾವಿದನ ನೈಪುಣ್ಯತೆ, ಮತ್ತು ಕಲಾ ಸಾಮರ್ಥ್ಯದ ಅರಿವಾಗುತ್ತದೆ.

ವರ್ಣ ಬಳಸುವಿಕೆ, ನೆರಳು ಬೆಳಕಿನ ಕಲ್ಪನೆಯ ಜೊತೆ ಭಾವನೆಗಳ ಮೂಡಿಕೆ ಇವು ಕಲಾಕೃತಿಯ ಉತ್ಕೃಷ್ಟತೆಗೆ ಕಾರಣವಾಗುತ್ತದೆ. (ಕಲಾಕೃತಿ ನೀರಿನಿಂದ ಹಾಳಾಗಿದೆ.) ಆದರೆ ಇದೊಂದು ಅಪರೂಪದ ಕೃತಿ.

ಈ ಚಿತ್ರದಲ್ಲಿ ಏಕಾಗ್ರ ಚಿತ್ತನಾಗಿ ಕುಳಿತ ಯೋಗಿಗೆ ಬಾಹ್ಯದ ಪರಿವೆ ಒಂದಿನಿತೂ ಇಲ್ಲ. ಮೈಮೇಲೆ ಲಂಗೋಟಿ ವಿನಃ ಅನ್ಯವಸ್ತ್ರಗಳಿಲ್ಲ. ಕಣ್ಣುಗಳನ್ನು ಮುಚ್ಚಿ ಬಲಗಾಲನ್ನು ಮಡಚಿ ಕುಳಿತಿದ್ದಾನೆ. ಬಲ ತೊಡೆಯ ಮೇಲಿರಿಸಿರುವ ಬಲಗೈಯಲ್ಲಿರುವ ಜಪಸರ ಧ್ಯಾನದ ಗಾಢತೆಯನ್ನು ಸೂಚಿಸುತ್ತದೆ. ಹರವಾದ ಎದೆ, ಬಲಿಷ್ಟವಾದ ತೋಳುಗಳ ಯೋಗಿಯ ಈ ಚಿತ್ರದಲ್ಲಿ ಮಾನವ ತ್ವಚೆಯ ತದ್ರೂಪವರ್ಣ (ಸ್ಕಿನ್ ಕಲರ್)ವನ್ನು ತರಲು ಭೋಪಲೆಯವರು ಸಫಲರಾಗಿದ್ದಾರೆ. ಹಾಗೆಯೇ ವ್ಯಕ್ತಿಯ ಮೇಲೆ ಸಂಯೋಜಿಸಿದ ಬೆಳಕು ನೆರಳು, ಮುಖದಲ್ಲಿನ ದೃಢತೆ ಒಂದೊಂದೂ ಸಶಕ್ತವಾಗಿ ಮೂಡಿಬಂದಿರುವದು ಅವರ ಕಲಾಪರಾಕಾಷ್ಠತೆಯ ಕುರುಹಾಗಿದೆ. ಈ ಚಿತ್ರ ನಿಜಕ್ಕೂ ಅಪರೂಪ; ಅವರ್ಣನೀಯ. ಭೋಪಲೆಯವರ ಮೇರು ಕೃತಿ ಇದು. ಭುವನದ ಭಾಗ್ಯದಿಂದಾಗಿ ಆಗಮಿಸಿದ್ದ ಯುಗದ ಕಲಾವಿದ ಭೋಪಲೆ.

ಇದೇ ರೀತಿಯ ಅವರ ಅನೇಕ ಕೃತಿಗಳು ಮುಂಬಯಿಯ ಜೆ. ಜೆ. ಕಲಾಶಾಲೆಯ ಆರ್ಟ್ ಗ್ಯಾಲರಿಯ ಸಂಗ್ರಹಾಲಯದಲ್ಲಿವೆ. ಅಲ್ಲದೆ

೧೯೪೫-೪೬ ಸ್ವಾತಂತ್ರ್ಯ ಚಳವಳಿಯಲ್ಲಿ ಅವರು ಸ್ಟುಡಿಯೋ ಬಿಟ್ಟು ಕಲಬುರ್ಗಿಗೆ ಬಂದ ನಂತರ ಅವರ ಅನೇಕ ಕೃತಿಗಳು ರಕ್ಷಣೆ ಇಲ್ಲದೆ ಹಾಳಾದ ಸಂಗತಿ ತಿಳಿದು ಭೋಪಲೆಯವರ ಮನಸ್ಸಿನ ಮೇಲೆ ಬಹಳಷ್ಟು ಪರಿಣಾಮವಾಗುತ್ತದೆ.

## ಭೀಷ್ಮ ಪ್ರತಿಜ್ಞೆ

'ವ್ಯಾಪಾರಿ ಮನೋವೃತ್ತಿಯವರಿಗೆ ಇನ್ನು ಚಿತ್ರ ರಚಿಸಲಾರೆ.'

ಬಹುಶಃ ೧೯೪೯ರ ಅಕ್ಟೋಬರ್, ನವೆಂಬರ್ ತಿಂಗಳಲ್ಲಿ ಮುಂಬಯಿಯ ಖ್ಯಾತ ವರ್ತಕರೊಬ್ಬರು ತಮಗಾಗಿ ೧೯೫೦ನೇ ಇಸ್ವಿಯ ವಾರ್ಷಿಕ ಕ್ಯಾಲಂಡರ್‌ಗಳನ್ನು ರಚಿಸಿಕೊಡಲು ಭೋಪಲೆಯವರಲ್ಲಿ ವಿನಂತಿಸಿದರು. ಅದರಲ್ಲಿ ಮನಾಕರ್ಷಕ ಸುಂದರ ಸ್ತ್ರೀಯರ ಚಿತ್ರಗಳಿರಬೇಕೆಂದು ಆ ವ್ಯಾಪಾರಿ ಸೂಚಿಸಿದ. ಭೋಪಲೆ ಈ ಕೆಲಸವನ್ನು ತುಂಬಾ ಉತ್ಸಾಹದಿಂದ ಕೈಗೆತ್ತಿಕೊಂಡರು. ಮೊದಲಿನಿಂದಲೂ ಭಾರತ, ಭಾರತೀಯತೆಯನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದ ಅವರು ಈ ಚಿತ್ರಗಳಲ್ಲೂ ಅದನ್ನು ಸಮರ್ಥವಾಗಿ ಬಿಂಬಿಸಿದರು. 'ಅಖಂಡ ಭಾರತ' ಶೀರ್ಷಿಕೆಯ ಚಿತ್ರಗಳಿವು. ಸಮುದ್ರದಿಂದ ಮೇಲೆದ್ದ ಭಾರತದ ಮಧ್ಯವರ್ತಿ ನೆಲದ ಮೇಲೆ ಆಯಾ ರಾಜ್ಯಗಳನ್ನು ಪ್ರತಿನಿಧಿಸುವ ಆಯಾ ರಾಜ್ಯಗಳ ವೇಷಭೂಷಣದಿಂದ ಅಲಂಕೃತಗೊಂಡಿರುವ ಗೂರ್ಖಾ, ನೇಪಾಳ, ಬಂಗಾಲ, ಪಂಜಾಬ, ಬರ್ಮಾ, ದಕ್ಷಿಣ ಭಾರತ, ಉತ್ತರ ಭಾರತ ಹೀಗೆ ಹಿಂದಿನ ಅಖಂಡ ಭಾರತವನ್ನು ಸಂಕೇತಿಸುವ ೧೬ ಸ್ತ್ರೀಯರ ೧೬ ಪ್ರತ್ಯೇಕ ಚಿತ್ರಗಳನ್ನು ರಚಿಸಿದರು. ಭಾರತದ ಮೂರೂ ಕಡೆ ಭೋರ್ಗರೆವ ಕಡಲು ಅದರ ಕೆಳಭಾಗದಲ್ಲಿ ಚಿಗುರೊಡೆಯುತ್ತಿರುವ ಮರ, ಮೇಲ್ಭಾಗದಲ್ಲಿ ಗಾಂಧಿಟೋಪಿಧರಿಸಿರುವ ಭಾರತದ ಜನಪ್ರತಿನಿಧಿಗಳ ಸಂಕೇತ ಚಿತ್ರಗಳು ೫೦ x ೩೮ ಸೆಂ.ಮಿ. ಅಳತೆಯ ಜಲವರ್ಣದ ಸುಂದರವಾದ ಈ ಚಿತ್ರಗಳನ್ನು ತುಂಬಾ ಉತ್ಸುಕತೆಯಿಂದ ವ್ಯಾಪಾರಿಯ ಬಳಿಗೊಯ್ದಾಗ ಕಲೆಯ ಕುರಿತು ಕಿಂಚಿತ್ತೂ ತಿಳಿವಳಿಕೆ ಇರದ, ಆ ವ್ಯಾಪಾರಿ ತನ್ನ ವ್ಯಾಪಾರಿ ಬುದ್ಧಿಗನುಗುಣವಾಗಿ ಅವನು ಬಯಸಿದ್ದು ಅರೆ ತೆರೆದ ದೇಹದ, ಮನೋದ್ರೇಕಗೊಳಿಸುವ ಲಂಪಟ ಸ್ತ್ರೀಯರ ಚಿತ್ರಗಳನ್ನು. ಉನ್ನತ ಸಂಸ್ಕೃತಿಯ ಅಪ್ಪಟ ದೇಶೀಯ ಚಿತ್ರಗಳನ್ನು ಆ ವ್ಯಾಪಾರಿ ತಿರಸ್ಕರಿಸಿದಾಗ

ನೂರಾರು ಕೋಲ್ಮಿಂಚುಗಳು ಥಟ್ಟನೆ ಕೋರೈಸಿ ಸಿಡಿಲೊಂದು ಅಪ್ಪಳಿಸಿದಂತಾಯಿತು. ಸ್ವಾಭಿಮಾನ ಹಾಗೂ ಭಾವುಕ ಮನದ ಭೋಪಲೆಯವರು ಈ ಘಟನೆಯಿಂದ ತುಂಬಾನೊಂದುಕೊಂಡರು. ಚಿತ್ರಕಲೆಯ ಮೇಲಿದ್ದ ವಾಂಛೆ ಹಾಗೂ ಅಭಿಮಾನ ಸರ್‍ರನೆ ಜಾರಿತು. ಚಿತ್ರಕಲಾ ವೃತ್ತಿಗೇ ತಿಲಾಂಜಲಿಯನ್ನೀಯಬೇಕೆಂಬ ತೀರ್ಮಾನಕ್ಕೆ ಬಂದರು. ಇಂದಿನಿಂದ ವ್ಯಾಪಾರಿ ಮನೋವೃತ್ತಿಯವರಿಗಾಗಿ ಚಿತ್ರ ರಚಿಸಲಾರೆನೆಂದು ದೃಢ ಪ್ರತಿಜ್ಞೆಗೈದರು. ಭೋಪಲೆಯವರ ಚಿತ್ರಗಳಿಗೆ ನೆಲೆ ಬೆಲೆಯಿದ್ದಾಗಲೇ ನಡೆದ ಈ ಘಟನೆ ತುಂಬದುರದೃಷ್ಟಕರ. ಈ ಘಟನೆಯಿಂದ ಮನ ನೊಂದುಕೊಂಡ ಭೋಪಲೆಯವರು ಮುಂಬಯಿಯಿಂದ ಕಲಬುರ್ಗಿಗೆ ಬಂದು ಕೆಲಕಾಲ ಚಿತ್ರಕಲೆಯನ್ನೇ ತೊರೆದರು. ಹಕೀಮ ವೃತ್ತಿಯಲ್ಲಿ ತೊಡಗಿ ಆ ದುರ್ಘಟನೆಯನ್ನು ಮರೆಯಲೆತ್ನಿಸಿದರು. ಆಗ ಚಿತ್ರಕಲೆಯ ಕುರಿತು ಮಾತೆತ್ತಿದರೆ ತುಂಬಾ ವ್ಯಗ್ರರಾಗಿ ಆಕ್ರೋಶಗೊಳ್ಳುತ್ತಿದರು. ಅವರ ಕುಂಚ ಬಣ್ಣಗಳು ಕೆಲಕಾಲ ಅನಾಥ ಪ್ರಜ್ಞೆಯನ್ನು ಅನುಭವಿಸಿದರೂ ಪುನಃ ಅವುಗಳ ಆಕರ್ಷಣೆಗೆ ಒಳಗಾಗಿ ಕೃತಿ ರಚನೆಗೆ ತೊಡಗಿದರು. ಹಜರತ್ ಖಾಜಾ ಬಂದೇನವಾಜ ದರ್ಗಾದ ವಾರಸುದಾರರಿಗೆ ಹೈದರಾಬಾದಿನ ನಿಜಾಮರು ಕಲಬುರ್ಗಿಯ ಪ್ರದೇಶವನ್ನು ಜಹಾಗೀರಾಗಿ ಕೊಟ್ಟಿದ್ದರು. ರಾಜಪರಿವಾರ, ಇನ್ನಿತರ ಅಧಿಕಾರವರ್ಗದವರು ಕಲುಬುರ್ಗಿಗೆ ಬಂದಾಗ ಉಳಿದುಕೊಳ್ಳಲು ದರ್ಗಾದ ಹತ್ತಿರವಿರುವ ಬಡಾರೋಜಾ ಪ್ರದೇಶದಲ್ಲಿ ನೂರ್‌ಬಾಗ್ ಎಂಬ ಸುಂದರ ಭವ್ಯ ಕಟ್ಟಡವನ್ನು ಕಟ್ಟಿಸಿದ್ದರು. ತುಂಬಾ ಚೆಲುವಾದ ಪ್ರಶಾಂತವಾದ ಈ ಕಟ್ಟಡವನ್ನ ಅವರು ತುಂಬಾ ಮೆಚ್ಚಿಕೊಂಡಿದ್ದರು. ಅಲ್ಲಯೇ ಹೆಚ್ಚಾಗಿ ಇರುತ್ತಿದ್ದರು, ಬೋಪಲೆಯವರ ಅನೇಕ ಕೃತಿಗಳ ರಚನೆಗೆ ಪ್ರೇರಣೆ ನೀಡಿದ ತಾಣ 'ನೂರ್‌ಬಾಗ್'.

## ಆಘಾತ ಹಾಗೂ ಅಂತ್ಯ

ಸುಖ ಸಮೃದ್ಧಿಯ ಸಂತಸದ ಲವಲವಿಕೆಯ ಬಾಲ್ಯ ಹಾಗೂ ಯೌವನವನ್ನು ಕಳೆದಿದ್ದ ಭೋಪಲೆಯವರಿಗೆ ಪ್ರಚಂಡ ಪ್ರತಿಭೆಯನ್ನು ಹೃದಯ ಶ್ರೀಮಂತಿಕೆಯನ್ನು ಧಾರಾಳವಾಗಿ ನೀಡಿದ್ದ ವಿಧಾತ ಅಂತಿಮ ದಿನಗಳಲ್ಲಿ ಅಷ್ಟೇ ಕ್ರೂರ ಆಘಾತಗಳನ್ನು ನೀಡಿ ಅವರ ಇಡೀ ಬದುಕನ್ನೇ ಅಲುಗಾಡಿಸಿ ಬಣ್ಣದ ಮತ್ತು ನಿಜ ಜೀವನದ ಬದುಕಿಗೆ ವಿದಾಯ

ಹೇಳುವಂತೆ ಮಾಡಿ ವಿಧಿಯೆನ್ನಿಸಿಕೊಂಡ.

ಪತ್ನಿ ಮಗುವಿನೊಡನೆ ನೆಮ್ಮದಿಯಿಂದಿದ್ದ ಭೋಪಲೆಯವರಿಗೆ ಮಡದಿಯ ಆಕಸ್ಮಿಕ ಸಾವು ವಿಧಿ ನೀಡಿದ ಮೊದಲನೇ ಆಘಾತ. ಆದರೂ ಹೇಗೊ ಸಾವರಿಸಿಕೊಂಡು ಚಿಕ್ಕ ಮಗು ನಾರಾಯಣನನ್ನು ಅಕ್ಕರೆಯ ಅಣ್ಣ ಅತ್ತಿಗೆಯ ಮಡಲಿಗೆ ಹಾಕಿ ಮುಂಬಯಿಗೆ ತೆರಳಿ ಅಲ್ಲಿ ಕಲಾ ಕೃತಿಗಳ ರಚನೆಯಲ್ಲೇ ಮನದ ದುಗುಡ ದುಮ್ಮಾನಗಳನ್ನು ಮರೆಯಲೆತ್ನಿಸುತ್ತಿದ್ದಾಗಲೇ ಮುಂಬಯಿಯ ಆ ವ್ಯಾಪಾರಿ ಅವರ ಕಲಾಕೃತಿಗಳನ್ನು ತಿರಸ್ಕರಿಸಿದುದು ಎರಡನೇಯ ದೊಡ್ಡ ಆಘಾತ. ತುಂಬಾ ನಿರಾಶರಾಗಿ ಹುಟ್ಟೂರು ಕಲಬುರ್ಗಿಗೆ ಸಾಂತ್ವನ ಬಯಸಿ ಬಂದು, ತಮ್ಮ ಪರಿವಾರ ಮತ್ತು ಗೆಳೆಯರೊಡನೆ ಬೆರೆತು ಹಕೀಮ ವೃತ್ತಿಯನ್ನು ಮಾಡುತ್ತಾ ಮನದ ಗಾಯವನ್ನು ಮಾಯಿಸಿಕೊಳ್ಳುತ್ತಿರುವಾಗಲೇ, ಮುಂಬಯಿಯಲ್ಲಾದ ಚಳುವಳಿ ಮತ್ತು ಗಲಭೆಯಲ್ಲಿ ದಾದರದಲ್ಲಿನ ಪಾರೆಕ್‌ಮಹಲ್‌ದ ಅವರ ಸ್ಟುಡಿಯೋ ದುಷ್ಕರ್ಮಿಗಳ, ದಂಗೆಕೋರರ ದಾಳಿಗೆ ಬಲಿಯಾಗಿ ಅವರ ಅಮೂಲ್ಯವಾದ ಜಲವರ್ಣ ತೈಲವರ್ಣ ಇನ್ನಿತರೆ ನೂರಾರು ಕಲಾಕೃತಿಗಳು ನಾಶವಾದುವೆಂಬ ಸಹಿಸಲಸಾಧ್ಯವಾದ ದಾರುಣ ವಾರ್ತೆಯು ವಿಧಿ ನೀಡಿದ ಮೂರನೇ ಆಘಾತ. ಇದರಿಂದಾಗಿ ಭೋಪಲೆಯವರು ತುಂಬಾ ಅಧೀರರಾದರು. ಇವನ್ನೆಲ್ಲಾ ಹೇಗೋ ಸಹಿಸಿಕೊಂಡು ಸಾಗಿರುವಾಗಲೇ ೧೯೬೨ರಲ್ಲಿ ತಾಯಿ ಚಂದ್ರವ್ವ ವಿಧಿವಶರಾದರು. ಈ ನೋವನ್ನು ನುಂಗಿಕೊಂಡು ಕಾಲ ನೂಕುತ್ತಿರುವಾಗ ಅಕ್ಕರೆಯಿಂದ ಪಾಲಿಸಿ, ಪೋಷಿಸಿ ತನ್ನ ಆಸಕ್ತ ಕಲಾಕ್ಷೇತ್ರದಲ್ಲಿ ಭವಿಷ್ಯವನ್ನು ರೂಪಿಸಿಕೊಳ್ಳಲು ಅನುವು ಮಾಡಿಕೊಟ್ಟ, ತಂದೆಯ ಸ್ವರೂಪಿ ಅಣ್ಣ ರಾಮಚಂದ್ರರಾವ್ ದಿನಾಂಕ ೨೮-೫-೧೯೬೩ರಂದು ಇನ್ನಿಲ್ಲವಾದುದು ಅವರನ್ನು ತುಂಬಾ ವಿವಶರನ್ನಾಗಿಸಿತು. ಅಣ್ಣನ ಮಮತೆ, ಕಾಳಜಿ, ಜೀವನಶ್ರದ್ಧೆ, ತಮ್ಮೆಲ್ಲರ ಸುಖಕ್ಕಾಗಿ ಅವನು ಪಟ್ಟ ಪರಿಶ್ರಮ, ಹಾಗೂ ತ್ಯಾಗ ಒಂದೊಂದೂ ಬಹುದಿನಗಳವರೆಗೆ ನೆನಪಾಗಿ ಕಾಡಿ ಕೋಮಲ ಹೃದಯದ ಭಾವುಕ ಮನದ ಭೋಪಲೆಯವರ ದೇಹ ಹಾಗೂ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಬೀರಿ, ಬದುಕಿನಲ್ಲಿ ಭರವಸೆಯನ್ನೇ ಕಳೆದುಕೊಂಡು ಕೈಚೆಲ್ಲಿ ಕೂಡುವಂತಾಯಿತು.

ಈ ಎಲ್ಲಾ ಕಷ್ಟ ನೋವುಗಳನ್ನು ಸಹಿಸಿದ್ದು ಬಾಳಿನ ಘೋರಾಂಧಕಾರದ ನಡುವೆ ಆಶಾಕಿರಣವಾಗಿದ್ದ ಇದ್ದೊಬ್ಬ ಮಗ ನಾರಾಯಣನಿಗೆ, ಅವನ

ಭವಿಷ್ಯಕ್ಕಾದರೂ ಭೋಪಲೆಯವರು ಬದುಕಲೇಬೇಕಾಗಿತ್ತು. ಅಲ್ಲೂ ವಿಧಿ ಅವರ ಪಾಲಿಗೆ ನಿರಾಶೆಯನ್ನೇ ಕಾದಿರಿಸಿತ್ತು. ಮಗ ತಮ್ಮಂತೆ ಕಲಾವಿದನಾಗುವುದು ಹೋಗಲಿ, ವಿದ್ಯಾವಂತನೂ ಕೂಡ ಆಗಲಿಲ್ಲ. ಈ ಕೊರಗು ಅವರನ್ನು ಸದಾ ಕಾಲ ಭಾದಿಸತೊಡಗಿತು. ಈ ನಡುವೆ ಅವರ ಅನಾರೋಗ್ಯ ಮನೆತನದ ಕೆಲ ವಿಷಯಗಳೂ ಕಾಡತೊಡಗಿದವು. ಈ ಎಲ್ಲಾ ಚಿಂತೆ ಹಾಗೂ ನೋವುಗಳಿಂದಾಗಿ ಅವರು ಚಿತ್ತ ಸ್ವಾಸ್ಥ್ಯವನ್ನು ದೇಹಾರೋಗ್ಯವನ್ನು ಕಳೆದುಕೊಂಡು ವ್ಯಗ್ರರಾಗಹತ್ತಿದರು. ತಂದೆಯ ಜವಾಬ್ದಾರಿ ಹಾಗೂ ಕರ್ತವ್ಯವನ್ನು ಆದಷ್ಟು ಬೇಗ ನೀಗಿಕೊಳ್ಳಲು ವಯಸ್ಸಿಗೆ ಬಂದ ಮಗನ ಮದುವೆಯನ್ನು ಮಾಡಲು ಮುಂದಾದರು. ತಮ್ಮಂದಿರ ಮಕ್ಕಳ ಮದುವೆಯ ಸಂದರ್ಭದಲ್ಲೇ ತಮ್ಮ ಮಗನ ಲಗ್ನದ ಏರ್ಪಾಟನ್ನೂ ಮಾಡಿದರು.

೧೯೬೬ರ ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ಭೋಪಲೆಯವರು ತೀವ್ರ ಅನಾರೋಗ್ಯಕ್ಕೆ ತುತ್ತಾದರು. ೮-೫-೧೯೬೬ ರಂದು ಮಕ್ಕಳೆಲ್ಲರ ಮದುವೆ. ಮದುವೆಯ ದಿನವು ಹತ್ತಿರವಾದಂತೆ ಅವರ ಆರೋಗ್ಯ ಹದಗೆಡುತ್ತಲೇ ಹೋಯಿತು. ನಗರದ ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಅವರನ್ನು ದಾಖಲು ಮಾಡಲಾಯಿತು. ಆಗಿನ ವೈದ್ಯಾಧಿಕಾರಿಯಾಗಿದ್ದ ಡಾ. ಗಜೇಂದ್ರನ್ ಈ ಕಲಾವಿದನನ್ನು ಉಳಿಸಿಕೊಳ್ಳಲು ಶಕ್ತಿಮೀರಿ ಶ್ರಮಿಸ ಹತ್ತಿದರು. ಗುಣಪಡಿಸುವ ಭರವಸೆಯನ್ನು ತಾಳಿದ್ದರು. ಕೊನೆ ಕೊನೆಗೆ ಭೋಪಲೆಯವರ ಆರೋಗ್ಯ ತುಂಬಾ ವಿಷಮಿಸತೊಡಗಿತು. ದಿನಾಂಕ ೮-೫-೧೯೬೬ ರಲ್ಲಿ ಇತ್ತ ಮನೆಯಲ್ಲಿ ಮಕ್ಕಳ ಮಂಗಳ ಕಾರ್ಯದ ಮದುವೆಯ ಸಂಭ್ರಮದ ಕ್ಷಣಗಳು! ಅತ್ತ ಆಸ್ಪತ್ರೆಯಲ್ಲಿ ತಂದೆಯ ಕೊನೆಯ ಉಸಿರಿನ ಎಣಿಕೆಗಳು! ಇದುವೆ ವಿಧಿಯ ವಿಪರೀತದ ಆಟ.

ಇದ್ದೊಬ್ಬ ಮಗನ ತಲೆಯ ಮೇಲೆ ಅಕ್ಷತೆ ಹಾಕದಂತಹ ಅಸಹಾಯಕತೆ ದುರಾವಸ್ಥೆ ಹಾಗೂ ದುರ್ದೈವವು ಭೋಪಲೆಯವರಿಗೆ ಒದಗಿ ಬಂದದ್ದು ಅವರಿಗೆ ವಿಧಿ ನೀಡಿದ ಕಟ್ಟ ಕಡೆಯ ಕಾಣಿಕೆ. ಮನೆಯಲ್ಲಿ ಮಕ್ಕಳ ತಲೆಯ ಮೇಲೆ ಮಂಗಳಾಕ್ಷತೆ ಬೀಳುತ್ತಿದ್ದಂತೆಯೇ ಆಸ್ಪತ್ರೆಯಲ್ಲಿ ಭೋಪಲೆಯವರ ಪ್ರಾಣಪಕ್ಷಿ ಹಾರಿ ಹೋಯಿತು. ಕಲಬುರ್ಗಿಯ ಪ್ರಜ್ವಲಿಸುವ ಕಲಾಜ್ಯೋತಿ ಬಾಳ ಬಿರುಗಾಳಿಗೆ ಹೊಯ್ದಾಡಿ ಕೊನೆಗೂ ನಂದಿ ಶಾಂತವಾಯಿತು. ಚಿತ್ರಕಲಾ ಕ್ಷೇತ್ರಕ್ಕೆ ಗಣನೀಯವಾದ ಕೊಡುಗೆಯನ್ನು ನೀಡಿ, ಭಾರತೀಯ

